*The Department of Public Instruction, Bombay.*

# A MANUAL

OF

# SANSKRIT AND KANARESE ROOTS

BY

RAO SAHEB PANDURANG VENKATESH CHINTAMANIPETHKAR.

2000 Copies.





BOMBAY:
GOVERNMENT CENTRAL BOOK DEPÔT.
1880.



*Price: 7 Annas 6 Pies.*

ಮುಂಬಯಿ ಇಲಾಖೆಯೊಳಗಿನ ಸರಕಾರದ ವಿದ್ಯಾಶಾಲಾಖಾತೆ.

ಸಂಸ್ಕೃತ—ಕನ್ನಡ

# ಶಬ್ದವ್ಯುತ್ಪತ್ತಿ.

ಇದನ್ನು

ರಾವಸಾಹೇಬ ಪಾಂಡುರಂಗ ವೆಂಕಟೇಶ ಚಿಂತಾಮಣಿಪೇಠಕರ,

ಇವರು ರಚಿಸಿದರು.

೨೦೦೦ ಪ್ರತಿಗಳು.





ಮುಂಬಯಿ :
ಗವರ್ನಮೆಂಟ ಸೆಂಟ್ರಲ್ ಬುಕ್ ಡಿಪೊ.
೧೮೮೦.



ಕ್ರಯ ೭ ಆಣೆ ೬ ಪೈ.

# ಪ್ರಸ್ತಾವನೆ.

ಪ್ರತಿ ಒಂದು ಭಾಷೆಯೊಳಗಿನ ಶಬ್ದಗಳಲ್ಲಿ ಸಿದ್ಧ ಸಾಧಿತ ಎಂಬವೆರಡು ಮುಖ್ಯ ಭೇದಗಳು ಉಂಟು. ಎರಡನೇ ಶಬ್ದಗಳಿಂದ ಹುಟ್ಟದೆ ತಮ್ಮಲ್ಲಿ ತಾವೇ ಸಿದ್ಧವಾದವುಗಳು ಸಿದ್ಧ ಶಬ್ದಗಳು. ಇವುಗಳಿಗೆ ಧಾತುಗಳು ಎಂಬ ಸಂಜ್ಞೆ. ಈ ಧಾತುಗಳಿಗೆ ಬೇರೆ ಬೇರೆ ಪ್ರತ್ಯಯಗಳು ಹತ್ತಿ ಹುಟ್ಟುವ ಹೊಸ ಶಬ್ದಗಳಿಗೆ ಸಾಧಿತ ಶಬ್ದಗಳು ಅನ್ನುತ್ತಾರೆ. ಮೂಲ ಧಾತುಗಳಿಗೆ ಪ್ರತ್ಯಯಗಳನ್ನು ಹಚ್ಚಿ ಹೊಸ ಶಬ್ದಗಳನ್ನು ಸಿದ್ಧ ಮಾಡುವ ಕ್ರಮಕ್ಕೆ "ಶಬ್ದವ್ಯುತ್ಪತ್ತಿ" ಎಂಬ ಹೆಸರುಂಟು. ಅದನ್ನು ಕಲಿಯುವದರಿಂದ ಶಬ್ದಗಳ ಮರ್ಮವು ಚನ್ನಾಗಿ ತಿಳಿಯುವದಲ್ಲದೆ, ಅರ್ಥವೂ ಹೆಚ್ಚಾಗಿ ಸ್ಪಷ್ಟವಾಗುವದು.

ಕನ್ನಡದಲ್ಲಿ ಮುಖ್ಯವಾಗ ತತ್ಸಮ, ತದ್ಭವ, ದೇಶ್ಯ ಶಬ್ದಗಳೇ ಬಹಳ. ಆದದರಿಂದ ಆ ಭಾಷೆಯ ಜ್ಞಾನವು

ಪೂರ್ಣವಾಗಿ ಆಗುವದರ ಸಲುವಾಗಿ, ಆ ಶಬ್ದಗಳು ಹೊರಟ ಮೂಲ ಧಾತುಗಳು, ಅವುಗಳ ಅರ್ಥಗಳು ಮುಂತಾದ್ದನ್ನು ತಿಳಿದು ಕೊಳ್ಳುವದು ಬಹಳ ಅವಶ್ಯವಾಗಿದೆ. ಅದಕ್ಕಾಗಿ ಈ ಪುಸ್ತಕದಲ್ಲಿ ಸಂಸ್ಕೃತ ಕನ್ನಡ ಕೂಡಿ ಒಟ್ಟು ಸುಮಾರು ೬೫೦ ಧಾತುಗಳೂ, ಅವುಗಳಿಂದ ಹುಟ್ಟಿದಂಥ ಸುಮಾರು ೪೫೦೦ ಮುಖ್ಯ ಮುಖ್ಯ ಶಬ್ದಗಳೂ ಕೊಟ್ಟಿರುತ್ತವೆ. ಅವುಗಳನ್ನೆಲ್ಲಾ ಲಕ್ಷ್ಯಪೂರ್ವಕವಾಗಿ ಕಲಿತರೆ, ಕನ್ನಡದಲ್ಲಿ ಸಾಧಾರಣ ಪ್ರಚಾರದಲ್ಲಿದ್ದ ಬಹುಶಃ ರೂಪಾವತ್ತು ಪ್ರಸಿದ್ಧ ಶಬ್ದಗಳ ವ್ಯುತ್ಪತ್ತಿಯು ಗೊತ್ತಾಗುವದು.

ಈ ಪುಸ್ತಕದಲ್ಲಿ ೨ ಭಾಗಗಳನ್ನು ಮಾಡಿ, ೧ನೇ ಭಾಗದಲ್ಲಿ ಸಂಸ್ಕೃತ ಧಾತುಗಳು, ೨ನೇ ಭಾಗದಲ್ಲಿ ಕನ್ನಡ ಧಾತುಗಳು ಹೇಳಿರುತ್ತವೆ. ಪ್ರತಿ ಒಂದು ಭಾಗದ ಆರಂಭಕ್ಕೆ ಕೊಟ್ಟಿರುವ ಸೂಚನೆಯ ವಿಷಯವು ಬಹಳ ಮಹತ್ವವುಳ್ಳದ್ದಾಗಿರುವದರಿಂದ ಶಿಕ್ಷಕನು ಅದರ ಕಡೆಗೆ ವಿಶೇಷ ಲಕ್ಷ್ಯ ಕೊಟ್ಟು, ಅದನ್ನು ವಿದ್ಯಾರ್ಥಿಗಳಿಗೆ ಚನ್ನಾಗಿ ತಿಳಿಸಿಕೊಡಬೇಕು. ಆದರೆ ಮುಂದಿನ ವಿಷಯ ತಿಳಿಯುವದಕ್ಕೆ ಸುಲಭವಾಗುವದು. ಎರಡೂ ಭಾಗಗಳಲ್ಲಿ ಮೊದಲು ಮೂಲ ಧಾತು ಬರೆದು, ಮುಂದೆ ಅದು ನಾಮವಿದ್ದಲ್ಲಿ ನಾ., ಸರ್ವನಾಮವಿದ್ದಲ್ಲಿ ಸ., ವಿಶೇಷಣವಿದ್ದಲ್ಲಿ ವಿ., ಕ್ರಿಯಾಪದ

ವಿದ್ದಲ್ಲಿ ಕ್ರಿ., ಅವ್ಯಯವಿದ್ದಲ್ಲಿ ಅ., ಎಂಬ ಸಂಜ್ಞಾಕ್ಷರಗಳು ಹಾಕಿರುತ್ತವೆ. ಮುಂದೆ ಕಂಸದಲ್ಲಿ ಆ ಧಾತುವಿನ ಅರ್ಥ ಬರೆದಿರುತ್ತದೆ. ಅದರ ಮುಂದೆ ಅದರಿಂದ ಹುಟ್ಟಿದ ಪ್ರಸಿದ್ಧ ಶಬ್ದಗಳ ವ್ಯುತ್ಪತ್ತಿಯ ಕ್ರಮ ಹಿಡಿದು ಕೊಟ್ಟಿರುತ್ತವೆ. ದುರ್ಬೋಧ ಶಬ್ದಗಳು ಬಂದಲ್ಲಿ, ಅವುಗಳ ಮುಂದೇ ಕಂಸದಲ್ಲಿ ಅವುಗಳ ಅರ್ಥವು ವಿವರಿಸಿರುತ್ತದೆ. ಕೆಲ ಕೆಲವು ಸ್ಥಳಗಳಲ್ಲಿ, ತತ್ಸಮ ಶಬ್ದಗಳೊಂದಿಗೆ ಚೌಕ ಕಂಸದಲ್ಲಿ ಅವುಗಳಿಂದ ಹೊರಟ ತದ್ಭವಗಳು ಹೇಳಿರುತ್ತವೆ.

ಶಿಕ್ಷಕನು ಹುಡುಗರಿಂದ ಈ ಪುಸ್ತಕದಲ್ಲಿ ಕೊಟ್ಟಿರುವ ಮೂಲ ಧಾತುಗಳನ್ನೂ ಅವುಗಳಿಂದ ಹೊರಟ ಶಬ್ದಗಳನ್ನೂ ಬರೇ ಪಾಠ ಮಾಡಿಸಿದರೆ ಸಾಕಾಗದು. ಅವನು ಪ್ರತಿ ಒಂದು ಮೂಲ ಧಾತುವಿಗೂ, ಅದರಿಂದ ವ್ಯುತ್ಪನ್ನಗಳಾದ ಶಬ್ದಗಳಿಗೂ ಇರುವ ಸಾಕ್ಷಾತ್ ಇಲ್ಲವೆ ಪರಂಪರಾಗತ ಸಂಬಂಧವನ್ನು ಪೂರ್ಣವಾಗಿ ಅವರ ಲಕ್ಷ್ಯದಲ್ಲಿ ತಂದು ಕೊಡ ಬೇಕು. ಇದಲ್ಲದೆ ಆ ಶಬ್ದಗಳಿಗೆ ಸಜಾತೀಯಗಳಾದ ಎರಡನೇ ಶಬ್ದಗಳನ್ನು ಅವರಿಂದ ಹುಡುಕಿ ತೆಗಿಸಿ, ಅವುಗಳ ಅರ್ಥವನ್ನೂ ಮೂಲ ಧಾತುವಿಗಿರುವ ಸಂಬಂಧವನ್ನೂ ವ್ಯಕ್ತ ಮಾಡಿ ಹೇಳ ಬೇಕು. ಒಮ್ಮೊಮ್ಮೆ ಅವರಿಗೆ ಕೆಲವು ಮೂಲ ಧಾತುಗಳನ್ನು ಹೇಳಿ ಅವುಗಳಿಂದ

ಹುಟ್ಟಿದ ಶಬ್ದಗಳನ್ನು ವಿವರ ಸಹಿತ ಬರೆಯ ಹೇಳ ಬೇಕು; ಮತ್ತು ಒಮ್ಮೊಮ್ಮೆ ವ್ಯುತ್ಪನ್ನಶಬ್ದಗಳನ್ನು ಕೊಟ್ಟು ಅವುಗಳ ಧಾತುಗಳನ್ನು ಕೇಳ ಬೇಕು. ಈ ಮೇರೆಗೆ ಮಾಡುವದರಿಂದ ಶಬ್ದವ್ಯುತ್ಪತ್ತಿಯ ವಿಷಯವು ವಿದ್ಯಾರ್ಥಿಗಳಿಗೆ ಚನ್ನಾಗಿ ಅವಗತವಾಗುವದು.

---

# ಅನುಕ್ರಮಣಿಕೆ.

೮೫. ಗದ್
೮೬. ಗಮ್
೮೭. ಗರ್ಜ್
೮೮. ಗರ್ವ್
೮೯. ಗಲ್
೯೦. ಗುಣ್
೯೧. ಗುಪ್
೯೨. ಗುಪ್
೯೩. ಗುಫ್
೯೪. ಗುಹ್
೯೫. ಗೈ
೯೬. ಗೋ
೯೭. ಗ್ರಥ್
೯೮. ಗ್ರಸ್
೯೯. ಗ್ರಹ್
೧೦೦. ಗ್ರಾಮ್
೧೦೧. ಗ್ಲೈ
೧೦೨. ಘಟ್
೧೦೩. ಘುಷ್
೧೦೪. ಘೃ
೧೦೫. ಘೃಷ್
೧೦೬. ಘ್ರಾ
೧೦೭. ಚಡ್
೧೦೮. ಚತುರ್
೧೦೯. ಚರ್
೧೧೦. ಚರ್ಚ್
೧೧೧. ಚರ್ವ್
೧೧೨. ಚಲ್
೧೧೩. ಚಿ
೧೧೪. ಚಿತ್
೧೧೫. ಚಿತ್ರ್
೧೧೬. ಚಿರ್
೧೧೭. ಚುರ್
೧೧೮. ಚುಷ್
೧೧೯. ಚೇಷ್ಟ್
೧೨೦. ಚ್ಯು
೧೨೧. ಛದ್
೧೨೨. ಛಿದ್
೧೨೩. ಛುರ್
೧೨೪. ಜಟ್
೧೨೫. ಜಡ್
೧೨೬. ಜನ್
೧೨೭. ಜಲ್ಪ್
೧೨೮. ಜಾಗೃ
೧೨೯. ಜಿ
೧೩೦. ಜೀವ್
೧೩೧. ಜೃಭ್
೧೩೨. ಜ್ಯಾ
೧೩೩. ಜ್ಞಪ್
೧೩೪. ಜ್ಞಾ
೧೩೫. ಜ್ಞಾ
೧೩೬. ಜ್ಯುತ್
೧೩೭. ಜ್ವರ್
೧೩೮. ಜ್ವಲ್
೧೩೯. ಟಿಕ್
೧೪೦. ಟೀಕ್
೧೪೧. ಡೈ
೧೪೨. ತಟ್
೧೪೩. ತಡ್
೧೪೪. ತತ್
೧೪೫. ತನ್
೧೪೬. ತಮ್
೧೪೭. ತರ್ಕ್
೧೪೮. ತಿಜ್
೧೪೯. ತುರ್
೧೫೦. ತುಲ್
೧೫೧. ತೃ
೧೫೨. ತೃಷ್
೧೫೩. ತ್ಯಜ್
೧೫೪. ತ್ರಸ್
೧೫೫. ತ್ರಿ
೧೫೬. ತ್ರೈ
೧೫೭. ತ್ವರ್
೧೫೮. ದಂಡ್
೧೫೯. ದಂಭ್
೧೬೦. ದಮ್
೧೬೧. ದಯ್
೧೬೨. ದಲ್
೧೬೩. ದಶ್
೧೬೪. ದಹ್
೧೬೫. ದಾ
೧೬೬. ದಾಸ್
೧೬೭. ದಿಶ್
೧೬೮. ದೀ
೧೬೯. ದೀಕ್ಷ್
೧೭೦. ದುಷ್
೧೭೧. ದೂಷ್
೧೭೨. ದೃ
೧೭೩. ದೃಭ್
೧೭೪. ದೃಶ್
೧೭೫. ದ್ರಾ
೧೭೬. ದೈ
೧೭೭. ದ್ಯುತ್

೧೭೮. ದ್ರುಹ್
೧೭೯. ದ್ರೈ
೧೮೦. ದ್ವಿ
೧೮೧. ದ್ವಿಷ್
೧೮೨. ಧನ್
೧೮೩. ಧಾ
೧೮೪. ಧೂಪ್
೧೮೫. ಧೃ
೧೮೬. ಧ್ಮಾ
೧೮೭. ಧ್ಯೈ
೧೮೮. ಧ್ವನ್
೧೮೯. ಧ್ವಂಸ್
೧೯೦. ನಟ್
೧೯೧. ನದ್
೧೯೨. ನಂದ್
೧೯೩. ನಮ್
೧೯೪. ನಲ್
೧೯೫. ನವನ್
೧೯೬. ನಶ್
೧೯೭. ನಾಥ್
೧೯೮. ನಿಂದ್
೧೯೯. ನೀ
೨೦೦. ನುದ್
೨೦೧. ನೃತ್
೨೦೨. ಪಚ್
೨೦೩. ಪಟ್
೨೦೪. ಪಂಚನ್
೨೦೫. ಪಠ್
೨೦೬. ಪಣ್
೨೦೭. ಪತ್
೨೦೮. ಪಥ್

೨೦೯. ವದ್
೨೧೦. ಪಶ್
೨೧೧. ಪಾ
೨೧೨. ಪಾಲ್
೨೧೩. ಪಿಡ್
೨೧೪. ಪಿಷ್
೨೧೫. ಪೀಡ್
೨೧೬. ಪುಷ್
೨೧೭. ಪೂ
೨೧೮. ಪೂಜ್
೨೧೯. ಪೃ
೨೨೦. ಪೃಚ್
೨೨೧. ಪ್ಯಾ
೨೨೨. ಪ್ರಚ್ಛ್
೨೨೩. ಪ್ರಥ್
೨೨೪. ಪ್ರೀ
೨೨೫. ಫಲ್
೨೨೬. ಬಂಧ್
೨೨೭. ಬಲ್
೨೨೮. ಬಾಧ್
೨೨೯. ಬೀಜ್
೨೩೦. ಬುಧ್
೨೩೧ ಬೃಹ್
೨೩೨. ಭಕ್ಷ್
೨೩೩. ಭಜ್
೨೩೪. ಭಚ್
೨೩೫. ಭಂಜ್
೨೩೬. ಭಣ್
೨೩೭. ಭರ್ತ್ಸ್
೨೩೮. ಭಾ
೨೩೯. ಭಾಸ್

೨೪೦. ಭಿಕ್ಷ್
೨೪೧. ಭುಜ್
೨೪೨. ಭೂ
೨೪೩. ಭೂಷ್
೨೪೪. ಭೃ
೨೪೫. ಭೃಜ್
೨೪೬. ಭ್ರಮ್
೨೪೭. ಭ್ರಂಶ್
೨೪೮. ಮಕ್ಷ್
೨೪೯. ಮಗ್
೨೫೦. ಮಜ್ಜ್
೨೫೧. ಮಡ್
೨೫೨. ಮಂತ್ರ್
೨೫೩. ಮಥ್
೨೫೪. ಮದ್
೨೫೫. ಮನ್
೨೫೬. ಮಹ್
೨೫೭. ಮಾ
೨೫೮. ಮಿಲ್
೨೫೯. ಮಿಶ್ರ್
೨೬೦. ಮುಚ್
೨೬೧. ಮುದ್
೨೬೨. ಮುರ್ಛ್
೨೬೩. ಮುಹ್
೨೬೪. ಮೃ
೨೬೫. ಮೃಗ್
೨೬೬. ಮೃದ್
೨೬೭. ಮ್ಲೈ
೨೬೮. ಯಾಚ್
೨೬೯. ಯತ್
೨೭೦. ಯಮ್

೨೭೧. ಯಸ್
೨೭೨. ಯಾ
೨೭೩. ಯಾಚ್
೨೭೪. ಯುಚ್
೨೭೫. ಯುಜ್
೨೭೬. ಯುಧ್
೨೭೭. ರಕ್ಷ್
೨೭೮. ರಚ್
೨೭೯. ರಜ್
೨೮೦. ರದ್
೨೮೧. ರಭ್
೨೮೨. ರಮ್
೨೮೩. ರಸ್
೨೮೪. ರಾಜ್
೨೮೫. ರಿಚ್
೨೮೬. ರೀ
೨೮೭. ರು
೨೮೮. ರುಜ್
೨೮೯. ರುದ್
೨೯೦. ರುಧ್
೨೯೧. ರುಷ್
೨೯೨. ರುಹ್
೨೯೩. ರೇಖ್
೨೯೪. ಲಗ್
೨೯೫. ಲಘ್
೨೯೬. ಲಜ್ಜ್
೨೯೭. ಲಪ್
೨೯೮. ಲಭ್
೨೯೯. ಲಷ್
೩೦೦. ಲಸ್
೩೦೧. ಲಾಞ್ಛ್
೩೦೨. ಲಿ
೩೦೩. ಲಿಖ್
೩೦೪. ಲಿಪ್
೩೦೫. ಲಿಹ್
೩೦೬. ಲುಠ್
೩೦೭. ಲುಪ್
೩೦೮. ಲುಭ್
೩೦೯. ಲೋಚ್
೩೧೦. ವಚ್
೩೧೧. ವಂಚ್
೩೧೨. ವದ್
೩೧೩. ವನ್ದ್
೩೧೪. ವಮ್
೩೧೫. ವಯ್
೩೧೬. ವರ್ಜ್
೩೧೭. ವರ್ಣ್
೩೧೮. ವಲ್
೩೧೯. ವಶ್
೩೨೦. ವಸ್
೩೨೧. ವಹ್
೩೨೨. ವಾ
೩೨೩. ವಾಞ್ಛ್
೩೨೪. ವಿಚ್
೩೨೫. ವಿಜ್
೩೨೬. ವಿದ್
೩೨೭. ವಿಶ್
೩೨೮. ವಿಷ್
೩೨೯. ವೃಧ್
೩೩೦. ವೃಶ್ಚ್
೩೩೧. ವೃಷ್
೩೩೨. ವೇಷ್ಟ್
೩೩೩. ವ್ಯಥ್
೩೩೪. ಶಕ್
೩೩೫. ಶಂಕ್
೩೩೬. ಶಪ್
೩೩೭. ಶಮ್
೩೩೮. ಶಂಸ್
೩೩೯. ಶಾಖ್
೩೪೦. ಶಾಸ್
೩೪೧. ಶಿಕ್ಷ್
೩೪೨. ಶಿಪ್
೩೪೩. ಶಿಷ್
೩೪೪. ಶೀ
೩೪೫. ಶುಚ್
೩೪೬. ಶುಚ್
೩೪೭. ಶುಧ್
೩೪೮. ಶುಭ್
೩೪೯. ಶುಷ್
೩೫೦. ಶೂಲ್
೩೫೧. ಶ್ರಮ್
೩೫೨. ಶ್ರೀ
೩೫೩. ಶ್ರು
೩೫೪. ಶ್ಲಾಘ್
೩೫೫. ಶ್ಲಿಷ್
೩೫೬. ಶ್ವಸ್
೩೫೭. ಷ್ಠಪ್
೩೫೮. ಸಪ್ತ್
೩೫೯. ಸಮ್
೩೬೦. ಸಹ್
೩೬೧. ಸಿಚ್
೩೬೨. ಸಿಧ್
೩೬೩. ಸು, ಸೂ

೩೬೪. ಸುಖ್
೩೬೫. ಸೂಚ್
೩೬೬. ಸೃ
೩೬೭. ಸೃಜ್
೩೬೮. ಸೃಪ್
೩೬೯. ಸೇವ್
೩೭೦. ಸ್ಖಲ್
೩೭೧. ಸ್ತಭ್
೩೭೨. ಸ್ತು
೩೭೩. ಸ್ತೃ
೩೭೪. ಸ್ಥಾ
೩೭೫. ಸ್ನಾ
೩೭೬. ಸ್ನಿಹ್
೩೭೭. ಸ್ಪರ್ಧ್
೩೭೮. ಸ್ಪೃಹ್
೩೭೯. ಸ್ಪೃಶ್
೩೮೦. ಸ್ಫುರ್
೩೮೧. ಸ್ಮಿ
೩೮೨. ಸ್ಮೃ
೩೮೩. ಸ್ರು
೩೮೪. ಸ್ವಪ್
೩೮೫. ಸ್ವರ್
೩೮೬. ಸ್ವಾದ್
೩೮೭. ಹನ್
೩೮೮. ಹಸ್
೩೮೯. ಹಾ
೩೯೦. ಹಿಂಸ್
೩೯೧. ಹು
೩೯೨. ಹೃ
೩೯೩. ಹೃಷ್
೩೯೪. ಹ್ರಸ್
೩೯೫. ಹ್ವೇ

---

## ಸೂಚನೆ.

ಈ ಭಾಗವನ್ನು ಕಲಿಸುವದಕ್ಕಿಂತ ಮೊದಲು ಶಿಕ್ಷಕನು ವಿದ್ಯಾರ್ಥಿಗಳಿಗೆ ಸಂಸ್ಕೃತ ಸ್ವರವ್ಯಂಜನಸಂಧಿಗಳ ನಿಯಮಗಳನ್ನು ತಿಳಿಸಿ ಕೊಟ್ಟು, ಬಳಿಕ ಕೆಳಗೆ ಬರೆದ ಉಪಸರ್ಗಗಳನ್ನೂ ಕೃತ್ ತದ್ಧಿತಪ್ರತ್ಯಯಗಳನ್ನೂ ಕಲಿಸ ಬೇಕು.

ಕ್ರಿಯಾಪದಗಳ ಹಿಂದೆ ಹತ್ತುವ ಅವ್ಯಯರೂಪಗಳಿಗೆ ಉಪಸರ್ಗಗಳು ಅನ್ನುತ್ತಾರೆ. ಅವು ಯಾವವೆಂದರೆ:—

| ಉಪಸರ್ಗ: | ಅರ್ಥಗಳು: | ಉದಾಹರಣಗಳು: |
|---|---|---|
| ಅತಿ. | ಆಧಿಕ್ಯ; ಉಲ್ಲಂಘನ. | ಅತಿರಕ್ತ; ಅತಿಕ್ರಮ (ಮೀರಿ ಹೋಗೋಣ). |
| ಅಧಿ. | ಶ್ರೇಷ್ಠತ್ವ. | ಅಧಿಕಾರ; ಅಧಿಪತಿ (ಒಡೆಯ). |
| ಅನು. | ಹಿಂದಿನಿಂದ; ಕೀಳ. | ಅನುಜ (ಹಿಂದಿನಿಂದ ಹುಟ್ಟಿದವ, ತಮ್ಮ); ಅನುಮಾನ. |
| ಅಪ. | ಕೆಳಗೆ; ಕೆಟ್ಟ; ದೂರ. | ಅಪಶಬ್ದ; ಅಪಸರಣ (ಹಿಂದಕ್ಕೆ ಸರಿಯೋಣ). |
| ಅಪಿ. | ಆವರಣ. | ಅಪಿಧಾನ (ಮುಚ್ಚೋಣ, ಮುಚ್ಚಳ). |
| ಅಭಿ. | ಸುತ್ತರೆ; ವರ್ಚಸ್ವ. | ಅಭಿಗಮನ; ಅಭಿಜ್ಞ (ಒಳ್ಳೇ ಜಾಣ) |
| ಅವ. | ಕೊರತೆ; ಹೆಚ್ಚಿಗೆ; ಕೆಳಗೆ. | ಅವಮಾನ (ಕಡಿಮೆ ಮಾನ); ಅವಧಾರಣ (ಹೆಚ್ಚಿಗೆ ತಿಳಿಕೊಳ್ಳೋಣ); ಅವನತ (ಕೆಳಗೆ ಬಾಗಿದವ). |

| ಉಪಸರ್ಗ: | ಅರ್ಥಗಳು: | ಉದಾಹರಣೆಗಳು: |
|---|---|---|
| ಆ. | ಕಿಂಚಿತ್, ವ್ಯಾಪ್ತಿ; ಮೇರೆ. | ಆಕಂಪಿತ (ತುಸು ಅಲ್ಲಾಡಿದ್ದು); ಆಮರಣ (ಸಾಯುವ ತನಕ); ಆಭೂಮಂಡಲ (ಭೂಮಂಡಲ ತುಂಬಾ) |
| ಉತ್. | ಮೇಲೆ, ಆಧಿಕ್ಯ. | ಉತ್ಕೃಷ್ಟ (ಮೇಲೆ ಜಗ್ಗಿ ತೆಗೆದ, ಆರಸಿದ); ಉನ್ಮತ್ತ (ಬಹಳ ಸೊಕ್ಕಿದವ). |
| ಉಪ. | ಸಮೀಪ, ಆಧಿಕ್ಯ. | ಉಪನೇತ್ರ; ಉಪಭೋಗ (ಅಧಿಕವಾದ ಭೋಗ) |
| ದುರ್ / ದುನ್ | ದುಷ್ಟ; ಕಠಿನ; ನಿಂದ್ಯ. | ದುರ್ಭಾಷಣ (ಕೆಟ್ಟ ನುಡಿ); ದುರ್ಬೋಧ (ತಿಳಿಯುವದಕ್ಕೆ ಕಠಿನವಾದದ್ದು); ದುರ್ಗತಿ (ನಿಂದ್ಯ ಗತಿ). |
| ನಿ. | ಅತ್ಯಂತ, ರಹಿತ. | ನಿಪಾತ (ಅತ್ಯಂತ=ದೊಡ್ಡ, —ಪಾತ); ನಿಗರ್ವ (ಗರ್ವರಹಿತ). |
| ನಿರ್ / ನಿನ್ | ಅತ್ಯಂತ, ಅಭಾವ. | ನಿರ್ಬಂಧ (ಅತ್ಯಂತ ಬಂಧ, ಆಗ್ರಹ); ನಿರಭ್ರ (ಮೋಡವಿಲ್ಲದ). |
| ಪರಾ. | ಹಿಂದೆ, ವಿಪರೀತ. | ಪರಾಙ್ಮುಖ (ಮೋರೆ ಹಿಂದಿರುಗಿದವ); ಪರಾಜಯ (ಜಯದ ವಿಪರೀತ, ಸೋಲ್ವಿಕೆ) |

| ಉಪಸರ್ಗ | ಅರ್ಥಗಳು: | ಉದಾಹರಣಗಳು: |
|---|---|---|
| ಪರಿ. | ಸುತ್ತುರೆ. ಅತ್ಯಂತ. | ಪರ್ಯಟನ (ಸುತ್ತುರೆ ತಿರುಗೋಣ); ಪರಿತ್ಯಾಗ (ಅತ್ಯಂತ ತ್ಯಾಗ, ತೀರ ಬಿಟ್ಟುಬಿಡೋಣ). |
| ಪ್ರ. | ಆಧಿಕ್ಯ. | ಪ್ರಗಲ್ಭ (ಹೆಚ್ಚು ಧೈರ್ಯವುಳ್ಳವ). |
| ಪ್ರತಿ. | ತಿರವು; ಬದಲಾಗಿ. | ಪ್ರತಿವಾದಿ (ತಿರವು ಮಾತಾಡುವವ); ಪ್ರತಿಭು (ಬದಲಾಗಿ ನಿಲ್ಲುವವ, ಹೊಣೆಗಾರ). |
| ವಿ. | ವಿರುದ್ಧ, ವಿಶೇಷ. | ವಿಪಕ್ಷ (ವಿರುದ್ಧ ಪಕ್ಷ, ಹಗೆಯು); ವಿಜ್ಞಾನ (ವಿಶೇಷ ಜ್ಞಾನ). |
| ಸಮ್. | ನೆಟ್ಟಗೆ, ಒಟ್ಟು. | ಸಂಸ್ಕೃತ (ನೆಟ್ಟಗೆ ಮಾಡಿದ್ದು, ತಿದ್ದಿದ್ದು); ಸಂಕರ (ಒಟ್ಟು ಮಾಡೋಣ, ಬೆರಿಕೆ). |
| ಸು. | ಸುಲಭ, ಅತ್ಯಂತ. | ಸುಲಭ (ದೊರೆಯುಲಿಕ್ಕೆ ಸುಲಭ); ಸುವೀರ (ಕಡುಗಲಿ). |

ಮೇಲಿನ ಉಪಸರ್ಗಗಳಲ್ಲದೆ ಮುಂದೆ ಬರೆದ ಅವ್ಯಯಗಳು ಶಬ್ದಗಳ ಹಿಂದೆ ಬರುವವು.

| ಅವ್ಯಯ: | ಅರ್ಥ: | ಉದಾಹರಣಗಳು: |
|---|---|---|
| ಅ. (ಇದು ವ್ಯಂಜನಾದಿ ಶಬ್ದದ ಪೂರ್ವದಲ್ಲಿ ಮಾತ್ರ ಬರುವದು). | ಅಭಾವ. | ಅಜ್ಞಾನ (ಜ್ಞಾನದ ಅಭಾವ). |

| ಅವ್ಯಯ: | ಅರ್ಥ: | ಉದಾಹರಣೆಗಳು: |
|---|---|---|
| **ಅನ್.** (ಇದು ಸ್ವರಾದಿ ಶಬ್ದದ ಆದಿಯಲ್ಲಿ ಮಾತ್ರ ಬರುವದು). | ಅಭಾವ. | ಅನಭ್ಯಾಸ (ಅಭ್ಯಾಸದ ಅಭಾವ). |
| **ಕು.** | ಕೆಟ್ಟ. | ಕುತರ್ಕ (ಕೆಟ್ಟತರ್ಕ). |
| **ಪುನರ್.** | ತಿರಿಗಿ. | ಪುನರ್ವಿವಾಹ (ತಿರಿಗಿ ಮದುವೆ). |
| **ಸ, ಸಹ.** | ಒಡನೆ. | ಸದೋಷ (ದೋಷದೊಡನೆ ಇದ್ದವ, ಅಪರಾಧೀ); ಸಹವಾಸ (ಕೂಡಿ ಇರೋಣ). |

ಕ್ರಿಯಾಪದಗಳ ಮುಂದೆ ಹತ್ತುವ ಪ್ರತ್ಯಯಗಳಿಗೆ ಕೃತ್‌ಪ್ರತ್ಯಯಗಳೆಂಬ ಸಂಜ್ಞೆ. ಅವುಗಳ ಮುಖ್ಯ ಪ್ರಕಾರಗಳು ಯಾವವೆಂದರೆ:—

ಕರ್ತೃವಾಚಕಪ್ರತ್ಯಯಗಳು — ಇವು, ಇವನು ಈ ಕ್ರಿಯೆಯನ್ನು ಮಾಡುವನು ಎಂಬ ಅರ್ಥದಲ್ಲಿ ಬರುವವು.

**ಅಕ.**— ಯಾಚ್ (ಬೇಡು)+ಅಕ=ಯಾಚಕ (ತಿರಕ).

**ಅನ.**— ಭಜ್ (ಸೇವಿಸು)+ಅನ=ಭಜನ (ಸೇವೆ).

**ಇತ್ರ.**— ಖನ್ (ತೋಡು)+ಇತ್ರ=ಖನಿತ್ರ (ಸಲಿಕೆ).

ಉ.— ಭಿಕ್ಷ್ (ಬೇಡು)+ಉ=ಭಿಕ್ಷು (ಬೇಡುವವನು).

ತಾ.—ದಾ (ಕೊಡು)+ತಾ=ದಾತಾ (ಕೊಡುವವ, ದಾನಿ).

ಮಾನ.—ಯಜ್ (ಯಜ್ಞ ಮಾಡು)+ಮಾನ=ಯಜಮಾನ (ಯಜ್ಞ ಮಾಡುವವ).

ವಾನ್.— ವಿದ್ (ತಿಳಿ)+ವಾನ್=ವಿದ್ವಾನ್ (ಜಾಣ).

ಕರ್ಮವಾಚಕಪ್ರತ್ಯಯಗಳು — ಇವು ಕ್ರಿಯೆಗಳ ಕರ್ಮವನ್ನು ತೋರಿಸುವವು.

ಅನೀಯ.— ಗಣ್ (ಲೆಕ್ಕಿಸು) + ಅನೀಯ = ಗಣನೀಯ (ಲೆಕ್ಕಿಸತಕ್ಕ).

ತವ್ಯ.—ಜ್ಞಾ (ತಿಳಿ)+ತವ್ಯ=ಜ್ಞಾತವ್ಯ (ತಿಳಿಯ ತಕ್ಕದ್ದು).

ಯ.—ಖಾದ್ (ತಿನ್ನು)+ಯ=ಖಾದ್ಯ (ತಿನ್ನ ತಕ್ಕದ್ದು).

ಭೂತಾರ್ಥಪ್ರತ್ಯಯಗಳು — ಇವು ಕ್ರಿಯೆಯು ಆಗಿ ಹೋಗಿದೆ ಎಂದು ಅರ್ಥವನ್ನು ತೋರಿಸುವವು.

ಇತ.—ಮಿಲ್ (ಕೂಡು)+ಇತ=ಮಿಲಿತ (ಕೂಡಿದ).

ಣ.—ಕ್ಷಿ (ಸೊರಗು)+ಣ=ಕ್ಷೀಣ (ಸೊರಗಿದ, ಬಡಕ).

ತ.—ಕೃ (ಮಾಡು)+ತ=ಕೃತ (ಮಾಡಿದ).

ಧ.—ಕ್ರುಧ್ (ಸಿಟ್ಟಾಗು)+ಧ=ಕ್ರುದ್ಧ(ಸಿಟ್ಟಾದ).

ನ.—ಮ್ಲಾ (ಬಾಡು)+ನ=ಮ್ಲಾನ (ಬಾಡಿದ).

ಭಾವವಾಚಕಪ್ರತ್ಯಯಗಳು — ಇವು ಕ್ರಿಯೆಗಳ ಭಾವವನ್ನು ತೋರಿಸುವವು. ಈ ಪ್ರತ್ಯಯಗಳು ಹತ್ತುವಾಗ ಕ್ರಿಯಾಪದಗಳಿಗೆ ಗುಣ ವೃದ್ಧಿ ವಿಕಾರಗಳು ಆಗುವವು.

**ಅ.**—ಸ್ಪೃಶ್ (ಸೋಂಕು)+ಅ=ಸ್ಪರ್ಶ (ಸೋಂಕು).

**ಅನ.**—ಪಾ (ಕುಡಿ)+ಅನ=ಪಾನ (ಕುಡಿಯೋಣ).

**ತಿ.**—ಕೃ (ಮಾಡು)+ತಿ=ಕೃತಿ (ಮಾಡೋಣ).

**ಯಾ.**—ಕೃ (ಮಾಡು)+ಯಾ=ಕ್ರಿಯಾ (ಮಾಡೋಣ).

ಪ್ರೇರಣಾರ್ಥಕಪ್ರತ್ಯಯಗಳು — ಇವು ಕ್ರಿಯೆಯನ್ನು ಮಾಡುವನು ಎರಡನೆಯವನು ಎಂಬ ಅರ್ಥವನ್ನು ತೋರಿಸುತ್ತವೆ.

(1.) ಪ್ರೇರಣಾರ್ಥದಲ್ಲಿ ಕ್ರಿಯಾಪದಗಳ ಉಪಾಂತ್ಯಕ್ಕೆ ಗುಣವಾಗುವದು. ಉದಾ: ಪುಷ್ (ಪೋಷಿಸು); ಪೋಷಿತ (ಪೋಷಿಸಿದ).

(2.) ಪ್ರೇರಣಾರ್ಥದಲ್ಲಿ ಅಕಾರಾಂತ ಕ್ರಿಯಾಪದಗಳಿಗೆ ಪ, ಅಥವಾ ಯ ಬರುವದು. ಉದಾ: ದಾ (ಕೊಡು); ದಾಪಿತ (ಕೊಡಿಸಿದ); ಪಾ (ಕುಡಿ); ಪಾಯಿತ (ಕುಡಿಸಿದ).

(3.) ಪ್ರೇರಣಾರ್ಥದಲ್ಲಿ ಇಕಾರಾಂತ ಧಾತುಗಳ ಮುಂದೆ ಆಪ ಬರುವದು. ಉದಾ: ಆಜ್ಞಾ (ಅಪ್ಪಣೇ ಮಾಡು); ಆಜ್ಞಾಪಿತ (ಅಪ್ಪಣೇ ಮಾಡಿದವ).

ಕ್ರಿಯಾಪದಗಳನ್ನು ಬಿಟ್ಟು ಉಳಿದ ಶಬ್ದಗಳ ಮೇಲೆ ಬರುವ ಪ್ರತ್ಯಯಗಳು ತದ್ಧಿತಪ್ರತ್ಯಯಗಳು. ಅವುಗಳಲ್ಲಿ ಮುಖ್ಯವಾದವುಗಳು ಯಾವವೆಂದರೆ:—

**ಅ.** ಈ ಪ್ರತ್ಯಯವು, ಇದು ಇವನ ಸ್ವಭಾವವು, ಇಲ್ಲವೆ ಧರ್ಮವು

ಎಂಬ ಅರ್ಥದಲ್ಲಿ ಬರುವದು. ಉದಾ: ತಮಸ್ (ಕತ್ತಲೆ); ತಾಮಸ (ಕತ್ತಲೆಯ ಧರ್ಮದವನು, ಕ್ರೂರನು).

**ಅ, ಇಕ.** ಈ ಪ್ರತ್ಯಯಗಳು, ಅದರಲ್ಲಿ ಹೆಸರಾದವ, ಇಲ್ಲವೆ ಅದರ ಒಡೆಯ, ಎಂಬ ಅರ್ಥದಲ್ಲಿ ಬರುವವು. ಉದಾ: ಪೃಥ್ವಿ (ಭೂಮಿ); ಪಾರ್ಥಿವ (ಭೂಮಿಯ ಒಡೆಯ); ಲೋಕ (ಜನ); ಲೌಕಿಕ (ಜನರಲ್ಲಿ ಹೆಸರಾಗೋಣ).

**ಅ, ಯ.** ಈ ಪ್ರತ್ಯಯಗಳು, ಇದು ಅದರ ವಿಕಾರ, ಎಂಬಲ್ಲಿ ಬರುವವು. ಉದಾ: ಪಯಸ್ (ಹಾಲು); ಪಾಯಸ (ಖೀರು). ಗೋ (ಆಕಳು); ಗವ್ಯ (ಆಕಳ ಸಂಬಂಧಿಯಾದದ್ದು, ಹಾಲು ಮೊಸರು ಮುಂತಾದದ್ದು).

**ಅ, ಇಕ, ಈಯ್, ತ್ಯ, ಯ.** ಈ ಪ್ರತ್ಯಯಗಳು, ಅದರಲ್ಲಿ ಹುಟ್ಟಿದ್ದು, ಎಂಬ ಅರ್ಥದಲ್ಲಿ ಬರುವವು. ಉದಾ: ಸಿಂಧು (ಸಮುದ್ರ); ಸೈಂಧವ (ಉಪ್ಪು). ತತ್ಕಾಲ (ಆಗಲೆ); ತಾತ್ಕಾಲಿಕ (ಆಗಲೆ ಆದ). ಸ್ವಜಾತಿ (ತನ್ನ ಕುಲ); ಸ್ವಜಾತೀಯ (ತನ್ನ ಕುಲದಲ್ಲಿ ಹುಟ್ಟಿದವ); ದಕ್ಷಿಣ (ತೆಂಕಣ); ದಾಕ್ಷಿಣಾತ್ಯ (ತೆಂಕಣದಲ್ಲಿ ಹುಟ್ಟಿದವ). ದಿವ (ಸ್ವರ್ಗ); ದಿವ್ಯ (ಸ್ವರ್ಗದಲ್ಲಿ ಹುಟ್ಟಿದ, ಸುಂದರ).

**ಅ, ತೀಯ, ಮ.** ಈ ಪ್ರತ್ಯಯಗಳು ಸಂಖ್ಯಾಪೂರಣಾರ್ಥದಲ್ಲಿ ಬರುವವು. ಉದಾ: ಏಕಾದಶ (ಹನ್ನೊಂದು); ಏಕಾದಶ (ಹನ್ನೊಂದನೆಯ); ದ್ವಿ (ಎರಡು); ದ್ವಿತೀಯ (ಎರಡನೆಯ). ಪಂಚ (ಐದು); ಪಂಚಮ (ಐದನೆಯ).

**ಅ, ಇಕ, ಮಾನ್, ವಾನ್, ವೀ.** ಈ ಪ್ರತ್ಯಯಗಳು, ಅದು ಉಳ್ಳವ, ಎಂಬ ಅರ್ಥದಲ್ಲಿ ಆಗುತ್ತವೆ. ಉದಾ: ಪ್ರಜ್ಞಾ (ತಿಳಿವಳಿಕೆ);

ಪ್ರಾಜ್ಞ (ಜಾಣ). ಮಾಯಾ (ಮೋಸು); ಮಾಯಿಕ (ಮೋಸಿನ). ಬುದ್ಧಿ (ತಿಳವಳಿಕೆ); ಬುದ್ಧಿಮಾನ್ (ತಿಳವಳಿಕೆಯುಳ್ಳವ). ಧನ (ದ್ರವ್ಯ); ಧನವಾನ್ (ದ್ರವ್ಯವುಳ್ಳವ). ಮೇಧಾ (ಬುದ್ಧಿ); ಮೇಧಾವೀ (ಬುದ್ಧಿಶಾಲಿ).

**ಅಕ, ಅಣ, ಇಕ.** ಈ ಪ್ರತ್ಯಯಗಳು, ಅದನ್ನು ಓದಿದವ, ಬಲ್ಲವ, ಎಂಬ ಅರ್ಥದಲ್ಲಿ ಬರುವವು. ಉದಾ: ಶಿಕ್ಷಾ (ಕಲಿಕೆ); ಶಿಕ್ಷಕ (ಕಲಿಸುವವ). ವ್ಯಾಕರಣ; ವೈಯಾಕರಣ (ವ್ಯಾಕರಣ ಬಲ್ಲವ). ವೇದ; ವೈದಿಕ (ವೇದ ಬಲ್ಲವ).

**ಇಕ.** ಈ ಪ್ರತ್ಯಯವು (1.) ಅದರಂತೆ ಆಚರಣ ಮಾಡುವವ, ನಡೆಯುವವ, ಎಂಬ ಅರ್ಥದಲ್ಲಿ ಆಗುವದು. ಉದಾ: ಧರ್ಮ; ಧಾರ್ಮಿಕ (ಧರ್ಮದಿಂದ ನಡೆಯುವವ). (2.) ಅಲ್ಲಿ ತಿರಗುವನು ಎಂಬ ಅರ್ಥದಲ್ಲಿ ಆಗುವದು. ಉದಾ: ಪಥ (ಹಾದಿ); ಪಥಿಕ (ಹಾದಿಗಾರ). (3.) ಆ ಕಾಲದಲ್ಲಿ ಮಾಡಿದ್ದು ಎಂಬ ಅರ್ಥದಲ್ಲಿ ಬರುವದು. ಉದಾ: ಅಹನ್ (ದಿವಸ); ಆಹ್ನಿಕ (ದಿವಸದಲ್ಲಿ ಮಾಡ ತಕ್ಕದ್ದು).

**ಇತ.** ಈ ಪ್ರತ್ಯಯವು, ಅದನ್ನು ಹೊಂದಿದವ ಎಂಬ ಅರ್ಥದಲ್ಲಿ ಬರುವದು. ಉದಾ: ಮೂರ್ಛಾ (ಕವಳಿ); ಮೂರ್ಛಿತ (ಕವಳಿ ಬಂದು ಬಿದ್ದವ).

**ಇಷ್ಠ.** ಈ ಪ್ರತ್ಯಯವು, ಅತಿಶಯದಿಂದ, ಎಂಬ ಅರ್ಥದಲ್ಲಿ ಬರುವದು. ಉದಾ: ಬಲೀ (ಕಸುವುಳ್ಳವ); ಬಲಿಷ್ಠ (ಅತಿಶಯ ಕಸುವುಳ್ಳವ).

**ತಾ, ತ್ವ, ಯ.** ಈ ಪ್ರತ್ಯಯಗಳು ಧರ್ಮ ಇಲ್ಲವೆ ಸ್ವಭಾವ ತೋರಿಸುತ್ತವೆ. ಉದಾ: ಜಡ; ಜಡತಾ. ಸ್ತ್ರೀ (ಹೆಂಗಸು); ಸ್ತ್ರೀತ್ವ (ಹೆಂಗಸುತನ); ಜಡ; ಜಾಡ್ಯ (ಜಡ್ಡು),

ಮಯ. ಈ ಪ್ರತ್ಯಯವು ಅದರಿಂದ ಪೂರ್ಣ ಎಂಬ ಅರ್ಥದಲ್ಲಿ ಬರುವದು. ಉದಾ: ಕೃಪಾ; ಕೃಪಾಮಯ (ಕೃಪಾಪೂರ್ಣ).

ಯ. ಈ ಪ್ರತ್ಯಯವು, ಆ ಬಗ್ಗೆ ತಕ್ಕವನು, ಎಂಬ ಅರ್ಥದಲ್ಲಿ ಬರುವದು. ಉದಾ: ಸಭಾ; ಸಭ್ಯ (ಸಭೆಗೆ ತಕ್ಕವ, ಸಂಭಾವಿತ). ದಂಡ (ಶಿಕ್ಷೆ); ದಂಡ್ಯ (ಶಿಕ್ಷೆಗೆ ಪಾತ್ರ)



**ಅಂಕ್** ಕ್ರಿ. (ಗುರ್ತ ಮಾಡು). ಅಂಕ [ಅಂಕಿ]; ಅಂಕನ [ಅಂಕಣ]; ಅಂಕಿತ (ಆಳು, ದಾಸ. ಪ್ರಾಚೀನ ಕಾಲದಲ್ಲಿ ದನಗಳಿಗೆ ಬರೆ ಹಾಕಿ ಗುರ್ತ ಮಾಡುವಂತೆ ಆಳುಮಕ್ಕಳಿಗೆ ಸಹ ಮಾಡುವ ರೂಢಿ ಇತ್ತು).

**ಅಗ್** ಕ್ರಿ. (ಹೋಗು). ಅಂಗ (ಮೈ, ಅವಯವ); ಅಂಗಣ [ಅಂಗಳ]; ಅಂತರಂಗ (ಅಂತರ್=ಒಳಗಿನ; ಮನಸ್ಸು); ಬಹಿರಂಗ (ಬಹಿರ್=ಹೊರಗಿನ; ಹೊರಮೈ); ವ್ಯಂಗ (ಅವಯವ ಕಡಿಮೆಯಾದವ, ಊನ); ಸಾಂಗ (ಯಾವತ್ತು ಅವಯವಗಳುಳ್ಳ, ಸಂಪೂರ್ಣ).

**ಅಂಚ್** ಕ್ರಿ. (ನಡೆ, ಹೋಗು). ಅರ್ವಾಚೀನ (ಅರ್ವಾಕ್=ಇತ್ತಕಡೆ; ಇತ್ತಕಡೆ ನಡೆದು ಬಂದ, ಈಗಿನ); ತಿರಶ್ಚೀನ (ತಿರಸ್=ಕೆಳಗೆ; ಕೆಳಗೆ ನೋಡಿ ನಡೆಯುವ ಜೀವ, ಪಶು); ಪ್ರಾಚೀನ (ಪ್ರ=ಮೊದಲು; ಹಿಂದೆ ನಡೆದ, ಮೊದಲಿನ).

**ಅಂಜ್** ಕ್ರಿ. (ಸ್ಪಷ್ಟ ಮಾಡು). ಅಂಜಲಿ (ಬೊಗಸೆ); ವ್ಯಕ್ತ (ಸ್ಪಷ್ಟ); ವ್ಯಕ್ತಿ (ಸ್ಪಷ್ಟತೆ, ಭೇದ). ವ್ಯಂಜಕ; ವ್ಯಂಜನ (ಸ್ವರ ರಹಿತ ಅಕ್ಷರ).

**ಅಟ್** ಕ್ರಿ. (ತಿರುಗು). ಅಟನ (ತಿರುಗೋಣ); ಅಟವೀ [ಅಡವಿ]; ಪರ್ಯಟನ (ನಾಲ್ಕು ಕಡಿಗೆ ತಿರುಗೋಣ).

**ಅತ್** ಕ್ರಿ. (ಸಂಚಾರ ಮಾಡು). ಆತ್ಮಾ (ಜೀವ); ಆತ್ಮೀಯ (ತನ್ನ ಜೀವದವ, ಬಾಂಧವ); ಜೀವಾತ್ಮಾ; ಪರಮಾತ್ಮಾ (ಪರಮ=ಹೆಚ್ಚಿನ); ಪರಾತ್ಮಾ.

**ಅದ್** ಕ್ರಿ. (ತಿನ್ನು). ಅದನ (ತಿನ್ನೋಣ); ಅದ್ಯ; ಅನ್ನ; ಕದನ್ನ (ಕದ್=ಕೆಟ್ಟ; ಕಾಡು ತಿನಸು); ಕ್ರವ್ಯಾದ (ಮಾಂಸ ತಿನ್ನುವವ, ರಾಕ್ಷಸ); ಪಕ್ವಾನ್ನ (ಪಕ್ವ=ಬೆಂದ; ಬೆಂದ ಕೂಳು; ಅಂದರೆ ರೂಢಿಯಲ್ಲಿ ಹಬ್ಬಾ ಹುಣ್ಣಿವೆಗೆ ಮಾಡ ತಕ್ಕ ಪದಾರ್ಥಗಳಿಗೆ ಈ ಶಬ್ದವನ್ನು ಉಪಯೋಗಿಸುತ್ತಾರೆ); ಪರಮಾನ್ನ (ಪರಮ=ಶ್ರೇಷ್ಠ, ಹೆಚ್ಚಿನ; ಎಲ್ಲಾ ಅನ್ನಗಳಲ್ಲಿ ಶ್ರೇಷ್ಠವಾದದ್ದು ಪಾಯಸ); ಮಿಷ್ಟಾನ್ನ (ಮಿಷ್ಟ=ಸವಿ; ಸವಿಗೂಳು).

**ಅನ್** ಕ್ರಿ. (ಬದುಕು). ಅನಿಲ (ಬದುಕುವ ಮೂಲತತ್ವ, ವಾಯು); ಪ್ರಾಣ (ಬದುಕು, ಜೀವ); ಪ್ರಾಣನ; ಪ್ರಾಣೀ.

**ಅಪ್** ಸಾ. (ನೀರು). ಅಬ್ಜ (ನೀರೊಳಗೆ ಹುಟ್ಟುವದು, ಕಮಲ); ಅಬ್ದ (ನೀರ ಕೊಡುವದು, ಮೋಡ); ಅಬ್ಭ್ರ; ಅಂತರೀಪ (ಅಂತರ್=ಒಳಗೆ; *ಈಪ=ನೀರು; ನೀರು ಸುತ್ತಿಗೊಂಡ ನೆಲ, ನಡುಗಡ್ಡೆ); ದ್ವೀಪ (ದ್ವಿ=ಎರಡು; *ಈಪ; ನಡುಗಡ್ಡೆ).

**ಅಮ್** ಕ್ರಿ. (ಬೇನೆ ಹುಟ್ಟು). ಆಮ (ಅನ್ನದ ಅಪಕ್ವರಸ, ಅರಿವೆ); ಆಮಯ (ಬೇನೆ); ಅನಾಮಯ (ಆರೋಗ್ಯ); ನಿರಾಮಯ; ಸಾಮಯ (ಬೇನೆಯುಳ್ಳ).

**ಅರ್ಚ್** ಕ್ರಿ. (ಪೂಜೆ ಮಾಡು). ಅರ್ಚಕ; ಅರ್ಚನ; ಅರ್ಚಾ; ಅರ್ಚಿತ; ಅರ್ಚ್ಯ; ಅಭ್ಯರ್ಚನ; ಪ್ರಾರ್ಚನ.

**ಅರ್ಜ** ಕ್ರಿ. (ಗಳಿಸು). ಅರ್ಜನ (ಗಳಿಕೆ); ಅರ್ಜಿತ (ಗಳಿಸಿದ); ದೈವಾರ್ಜಿತ (ದೈವದಿಂದ ಗಳಿಸಿದ್ದು); ಪಿತ್ರಾರ್ಜಿತ (ಪಿತೃ=ತಂದೆ; ತಂದೆ ಗಳಿಸಿದ್ದು); ಪೂರ್ವಾರ್ಜಿತ (ಪೂರ್ವ=ಹಿಂದಿನವ; ಹಿಂದಿನವ ಗಳಿಸಿದ್ದು); ಸ್ವಾರ್ಜಿತ (ಸ್ವ=ತಾನು; ಸ್ವಂತ ಗಳಿಸಿದ್ದು).

**ಅರ್ಥ್** ಕ್ರಿ. (ಬೇಡು, ಕೇಳು). ಅರ್ಥ (೧. ಕೇಳ ತಕ್ಕ ತಾತ್ಪರ್ಯ, ಉದ್ದೇಶ, ಹೇತು; ೨. ಎಲ್ಲರೂ ಬೇಡ ತಕ್ಕ ವಸ್ತು, ಹಣ); ಅರ್ಥೀ

* ಅಪ್ ಶಬ್ದಕ್ಕೆ ವಿಕಾರದಿಂದ ಈಪ ಎಂಬ ರೂಪ ಉಂಟಾಗುತ್ತದೆ.

(ಬೇಡುವವ, ತಿರಕ); ಪ್ರಾರ್ಥಕ; ಪ್ರಾರ್ಥನಾ; ಯಥಾರ್ಥ (ಯಥಾ=ಹ್ಯಾಗೆ; ಅರ್ಥ ಹ್ಯಾಗೆ ಅದೆಯೋ ಹಾಗೆ, ಇದ್ದ ರೀತಿ); ವ್ಯರ್ಥ (ಅರ್ಥವಿಲ್ಲದೆ, ಬರೆ, ಸುಮ್ಮನೆ); ಸಮರ್ಥ (ಎರಡನೆಯವರು ಬೇಡಿದ್ದು ಕೊಡ ತಕ್ಕ ಶಕ್ತಿಯುಳ್ಳವ); ಸ್ವಾರ್ಥ.

**ಅವ್** ಕ್ರಿ. (ಕಾಪಾಡು). ಅವನ (ರಕ್ಷಣ); ಅವನೀ (ಎಲ್ಲರನ್ನೂ ಕಾಪಾಡುವಂಥವಳು, ಭೂಮಿ); ಅವನೀಪತಿ (ಪತಿ=ಒಡೆಯ; ಅರಸನು); ಅವನೀಸುತೆ (ಸುತೆ=ಮಗಳು; ಪೃಥ್ವಿಯ ಮಗಳು, ಸೀತಾದೇವಿ).

**ಅಶ್** ಕ್ರಿ. (ತಿನ್ನು). ಅಶನ; ನಿರಶನ (ತಿನ್ನದೇ ಇರೋಣ, ಉಪವಾಸ); ಪ್ರಾಶಕ; ಪ್ರಾಶನ (ಕುಡಿಯೋಣ); ಅಮೃತಾಶನ (ಅಮೃತವನ್ನು ಕುಡಿಯುವವ, ದೇವಲೋಕದವ); ಪವನಾಶನ (ಗಾಳಿಯನ್ನು ಪಾನ ಮಾಡುವವ, ಸರ್ಪ).

**ಅಷ್ಟನ್** ಎ. (ಎಂಟು). ಅಷ್ಟಕ; ಅಷ್ಟಮ; ಅಷ್ಟಮಿಾ; ಅಷ್ಟಗಂಧ (ಗಂಧ=ಪರಿಮಳ); ಅಷ್ಟದಿಶಾ; ಅಷ್ಟಮೂರ್ತಿ (ಮೂರ್ತಿ=ಶರೀರ; ಎಂಟು ಶರೀರಗಳುಳ್ಳವ, ಶಿವ).

**ಅಸ್** ಕ್ರಿ. (ಇರು). ಅಸ್ತಿತ್ವ (ಇರೋಣ); ಆಸ್ತಿಕ (ದೇವರು ಇದ್ದಾನೆಂದು ನಂಬುವವ); ಆಸ್ತಿಕ್ಯ; ಸತ್ (ಇರುವ); ಸತ್ಯ (ಇರುವ ಸ್ಥಿತಿ, ಇದ್ದ ರೀತಿ, ಧಿಟ); ಸತ್ವ (ಇರೋಣ, ಬದುಕು; ಇದರ ಮೇಲಿಂದ ಪ್ರಾಣಿ); ಅಸತ್ಯ (ಇಲ್ಲದ್ದು, ಸುಳ್ಳು); ಸತ್ಯಧರ್ಮ (ನಿಜವಾದ ಧರ್ಮ); ಸತ್ಯನಿಷ್ಠ (ನಿಷ್ಠ=ಭಕ್ತಿಯುಳ್ಳವ); ಸತ್ಯವಾಕ್ಯ (ವಾಕ್ಯ=ಮಾತು); ಸತ್ಯಸಂಧ (ಸಂಧಾ=ಪ್ರತಿಜ್ಞಾ; ಮಾತಿಗೆ ತಪ್ಪದವ).

**ಅಹನ್** ನಾ. (ದಿವಸ). ಆಹ್ನಿಕ (ದಿವಸದಲ್ಲಿ ಮಾಡ ತಕ್ಕ ಧರ್ಮವಿಧಿ); ಅಪರಾಹ್ಣ (ದಿವಸದ ಉತ್ತರ ಭಾಗ); ಪರಾಹ್ಣ; ಪೂರ್ವಾಹ್ಣ; ಪ್ರಾಹ್ಣ (ದಿವಸದ ಪೂರ್ವಭಾಗ); ಮಧ್ಯಾಹ್ನ (ದಿವಸದ ಮಧ್ಯಭಾಗ); ಸಾಯಾಹ್ನ (ದಿವಸ ಮುಳುಗುವ ಹೊತ್ತು).

**ಅಹಮ್** ಸ. (ನಾನು). ಅಹಂಕಾರ; ಅಹಂಕೃತಿ; ಅಹಂತಾ, ಹೆಮ್ಮೆ; ಹೆಮ್ಮೆ; ಹೆಮ್ಮೆಗಾರ.

**ಆಪ್** ವಿ. (ದೊರೆ, ಪಡೆ). ಆಪ್ತ (ತನ್ನ ಪಡೆದವ, ತನ್ನವ); ಆಪ್ತಿ; ಅವಾಪ್ತ (ದೊರೆತ), ಪ್ರಾಪ್ತ; ಪ್ರಾಪ್ತಿ; ಪ್ರಾಪ್ಯ (ದೊರೆಯ ತಕ್ಕ); ವ್ಯಾಪಕ (ನಾಲ್ಕು ಕಡೆ ದೊರೆಯುವವ, ಹೋದಲ್ಲಿ ಇರುವವ); ವ್ಯಾಪ್ತ; ವ್ಯಾಪ್ತಿ; ಸಮಾಪ್ತ (ಪೂರಾ ದೊರೆದ, ಕೊನೆಗಂಡ, ಮುಗಿದ); ಸಮಾಪ್ತಿ.

**ಆಸ್** ಕ್ರಿ. (ಕೂಡು). ಆಸನ (ಗದ್ದಿಗೆ); ಶರಾಸನ (ಶರ=ಬಾಣ; ಬಾಣದ ಆಸನ, ಬಿಲ್ಲು). ನೃಪಾಸನ (ನೃಪ=ಅರಸನು; ಅರಸನ ಗದ್ದಿಗೆ); ಸಿಂಹಾಸನ*(ಸಿಂಹದ ಆಕಾರದ ಗದ್ದಿಗೆ).

**ಇ** ಕ್ರಿ. (ಹೋಗು). ಅಯನ (ಹೋಗುವಿಕೆ); ಆಯ; ಉದಯ (ಏಳ್ಗೆ); ಉಪಾಯ (ಹಂಚಿಕೆ); ಪರ್ಯಾಯ; ವ್ಯಯ [ವೆಚ್ಚ]; ಸಮಯ (ಕೂಡಿ ಹೋಗೋಣ, ಪ್ರಸಂಗ, ಹೊತ್ತು); ಸಾಮಯಿಕ (ಹೊತ್ತಿಗೆ ತಕ್ಕ).

**ಇ** * ಕ್ರಿ. (ಕಲಿ, ಓದು). ಅಧೀತ (ಓದಿದವ); ಅಧ್ಯಯನ (ಓದೋಣ); ಅಧ್ಯಾಪಕ (ಕಲಿಸುವವ); ಅಧ್ಯಾಪನ; ಅಧ್ಯೇತಾ (ಓದುವವ); ಅನಧ್ಯಾಯ (ಓದು ಇಲ್ಲದ ದಿನ); ಉಪಾಧ್ಯಾಯ (ಕಲಿಸುವವ); ಸ್ವಾಧ್ಯಾಯ (ವೇದಾಧ್ಯಯನ).

**ಇದ್** ಕ್ರಿ. (ಐಶ್ವರ್ಯ ಪಡು). ಇಂದಿರಾ (ಸಂಪತ್ತಿಯ ದೇವತೆ, ಲಕ್ಷ್ಮಿ); ಇಂದ್ರ; ಇಂದ್ರಾಣೀ (ಇಂದ್ರನ ಹೆಂಡತಿ).

**ಇಂಧ್** ಕ್ರಿ. (ಹೊತ್ತಿಸು). ಇಂಧನ (ಉರುವಲ); ಸಮಿತ್; ಸಮಿಧಾ (ಹೋಮಕ್ಕಾಗಿ ಹೊತ್ತಿದ ಬೆಂಕಿಯಲ್ಲಿ ಹಾಕುವ ಕಟ್ಟಿಗೇ ಚೂರುಗಳು).

---

* 'ಅಧಿ' ಉಪಸರ್ಗದ ಹೊರ್ತು ಈ ಧಾತುವಿನ ಪ್ರಯೋಗವಾಗುವದಿಲ್ಲ.

**ಇಷ್** ಕ್ರಿ. (ಬಯಿಸು). ಇಚ್ಛಾ; ಇಚ್ಛಿತ; ಇಷ್ಟ; ಇಷ್ಟಕಾರಕ; ಅನಿಷ್ಟ (ಬಯಿಸಲಾಗದ); ಅನಿಷ್ಟಕಾರಕ.

**ಈಕ್ಷ್** ಕ್ರಿ. (ನೋಡು). ಈಕ್ಷಣ (ಕಣ್ಣು); ಈಕ್ಷಾ; ಅಪೇಕ್ಷಾ; ಉಪೇಕ್ಷಾ; ನಿರೀಕ್ಷಾ (ಹಾದೀ ನೋಡೋಣ); ಪರೀಕ್ಷಕ; ಪರೀಕ್ಷಾ; ಪ್ರತೀಕ್ಷಾ; ಪ್ರೇಕ್ಷಾ; ಸಮೀಕ್ಷಣ (ವಿಚಾರಿಸಿ ನೋಡೋಣ); ಸಮೀಕ್ಷಿತ.

**ಈರ್** ಕ್ರಿ. (ಹೋಗು). ಈರಿತ (ಹೋಗಲಿಕ್ಕೆ ಹೇಳಿದಂಥವ); ಪ್ರೇರಕ; ಪ್ರೇರಣೆ (ಯಾವದಾದರೂ ಕಾರ್ಯ ಮಾಡುವದಕ್ಕಾಗಿ ಹೋಗೆಂಬ ಸೂಚನೆ); ಪ್ರೇರಿತ; ಸಮೀರ (ನಾಲ್ಕು ಕಡೆ ಸುತ್ತಾಡುವ ವಸ್ತು, ಗಾಳಿ); ಸಮೀರಣ.

**ಈಶ್** ಕ್ರಿ. (ಸಮರ್ಥನಾಗು). ಈಶ; ಈಶ್ವರ; ಐಶ್ವರ್ಯ (ಸಾಮರ್ಥ್ಯ, ಒಡೆತನ); ಅಧೀಶ, ಅಧೀಶ್ವರ; ನಿರೀಶ್ವರ (ದೇವರು ಇಲ್ಲೆಂದು ವಾದಿಸುವವ); ಸೇಶ್ವರ (ದೇವರು ಇದ್ದಾನೆಂದು ಒಪ್ಪಿ ಕೊಳ್ಳುವವ); ಜಗದೀಶ; ಜಗದೀಶ್ವರ; ಪರಮೇಶ; ಪರಮೇಶ್ವರ; ಮಹೇಶ (ಮಹಾ=ದೊಡ್ಡ); ಮಹೇಶ್ವರ; ಸರ್ವೇಶ್ವರ.

**ಉಷ್** ಕ್ರಿ. (ಸುಡು). ಉಷ್ಣ; ಉಷ್ಮಾ; ಅನುಷ್ಣ; ಕೋಷ್ಣ (ಕ=ಕಿಂಚಿತ್ತು, ತುಸ; ಬೆಚ್ಚನ್ನ); ಮಂದೋಷ್ಣ.

**ಊರ್ಜ್** ಕ್ರಿ. (ಕಸುವಾಗು). ಊರ್ಜ (ಕಸುವು); ಊರ್ಜಸ್ವೀ (ಕಸುವಾದವ, ಅರ್ಥಾತ್ ಪ್ರಬಲ, ಧೈರ್ಯವುಳ್ಳವ); ಊರ್ಜಿತ (ಕಸುವಾದ, ಪ್ರಬಲ).

**ಊರ್ಣ್** ಕ್ರಿ. (ಮುಚ್ಚು). ಊರ್ಣಾ [ಉಣ್ಣೆ]; ಊರ್ಣನಾಭಿ (ಹೊಟ್ಟೆಯೊಳಗಿಂದ ಉಣ್ಣೀ ಎಳೆ ತೆಗೆಯುವಂಥ ಪ್ರಾಣಿ, ಜೇಡಹುಳ).

**ಊಹ್** ಕ್ರಿ. (ತರ್ಕಿಸು) ಊಹ (ತರ್ಕ, ಕಾಯಾಸ); ದುರೂಹ (ಕಲ್ಪನೆಗೆ ನಿಲುಕದ).

**ಋ** ಕ್ರಿ. (ಹೋಗು, ತಿರಗು). ಋತು (ವರ್ಷಕ್ಕೊಮ್ಮೆ ತಿರಗಿ ಬರುವ ಕಾಲ); ಆರ್ತವ (ಋತುಸಂಬಂಧದ).

**ಋಜ್** ಕ್ರಿ. (ನೆಟ್ಟಗಾಗು). ಋಜು (ಸರಳ); ಆರ್ಜವ (ಸರಳತನ); ಆರ್ಜವೀ (ಸರಳತನದಿಂದ ಎರಡನೆಯವರ ಲೋಭ ಸಂಪಾದಿಸುವವ).

**ಋಧ್** ಕ್ರಿ. (ಬೆಳೆ). ಋದ್ಧಿ; ಸಮೃದ್ಧ (ಚನ್ನಾಗಿ ಬೆಳೆದ, ಪೂರ್ಣ); ಸಮೃದ್ಧಿ.

**ಏಕ** ವಿ. (ಒಂದು, ಒಬ್ಬ); ಏಕತಾ; ಏಕತ್ವ; ಏಕಾಕೀ (ಒಬ್ಬೊಂಟಿಗ); ಐಕ್ಯ.

**ಕಚ್** ಕ್ರಿ. (ಅರಳು, ಹರವು). 'ಕಚ (ಕೂದಲು, ತಲೆತುಂಬ ಹರವಿರುವ ಕೂದಲು); ವಿಕಚ (ಅರಳಿದ, ಹೂವಾದ).

**ಕಟ್** ಕ್ರಿ. (ಹೋಗು). ಕಟಿ (ನಡ); ಉತ್ಕಟ (ಸೂಸಿ ಹೋಗುವ, ಏರಿದ, ಸೊಕ್ಕಿದ); ನಿಕಟ; ಪ್ರಕಟ (ಹೊರಗೆ ಹೋಗುವ, ಪ್ರಸಿದ್ಧಿ ಪಡುವ); ಪ್ರಕಟನ; ಪ್ರಕಟಿತ; ವಿಕಟ (ಭಯಂಕರ).

**ಕಟ್** ಕ್ರಿ. (ಮುಚ್ಚು, ಸುತ್ತು). ಕಟ (ಚಾಪೆ); ಕಟಕ [ಕಡಗ]; ಸಂಕಟ (ನಾಲ್ಕು ಕಡೆಯಿಂದ ಸುತ್ತಿ ಬರುವಿಕೆ, ಪೇಚು).

**ಕಥ್** ಕ್ರಿ. (ಹೇಳು). ಕಥನ; ಕಥಾ (ಹೇಳಿಕೇ ಮಾತು); ಕಥಾನಕ; ಕಥಿತ; ಸಂಕಥಾ (ತಮ್ಮ ತಮ್ಮೊಳಗೆ ಮಾತಾಡೋಣ); ಸಂಕಥಿತ.

**ಕಪ್** ಕ್ರಿ. (ನಡಗು). ಕಂಪ; ಕಂಪನ; ಕಂಪಿತ; ಅನುಕಂಪಾ (ಎರಡನೆಯವರ ದುಃಖ ನೋಡಿ ಹುಟ್ಟುವ ಮನಸ್ಸಿನ ನಡುಗು, ದಯೆ); ಪ್ರಕಂಪನ (ಬಿರುಗಾಳಿ); ಪ್ರಕಂಪಿತ; ವಿಕಂಪ; ವಿಕಂಪನ; ವಿಕಂಪಿತ.

**ಕಮ್** ಕ್ರಿ. (ಬಯಸು). ಕಾಮ (ಬಯಕೆ); ಕಾಮನಾ; ಕಾಮುಕ (ಬಯಕೆಯುಳ್ಳವ); ಕಾಮ್ಯ; ನಿಷ್ಕಾಮ; ಸಕಾಮ.

**ಕಲ್** ಕ್ರಿ. (ಹೋಗು). ಕಲಾ (ಘಳಿಗೆಯ ೬೦ನೇ ಭಾಗ, ಸೂಕ್ಷ್ಮಕಾಲ); ಕಾಲ (ಹೋಗುವದು, ಹೊತ್ತು); ದುಷ್ಕಾಲ; ಪ್ರಾತಃಕಾಲ;

ಸಂಧ್ಯಾಕಾಲ; ಸಾಯಂಕಾಲ; ಸುಕಾಲ; ಸುಕಾಲಿಕ; ಕಾಲಜ್ಞ (ವೇಳೆ ತಿಳಿಯುವವ; ಜೋಯಿಸ, ಅಥವಾ ಚತುರ).

**ಕಷ್** ಕ್ರಿ. (ತಿಕ್ಕು). ಕಷ (ಒರೆ); ಕಷಾಯ (ತಿಕ್ಕಿ ಇಲ್ಲವೆ ಅರಿದು ತೆಗೆದ ರಸ); ಕಷ್ಟ (ತಿಕ್ಕಾಟ, ದುಃಖ); ನಿಕಷ (ಒರೆಗಲ್ಲು).

**ಕಾಂಕ್ಷ್** ಕ್ರಿ. (ಸಂದೇಹ ಬಡು). ಕಾಂಕ್ಷಾ; ಕಾಂಕ್ಷಿತ; ಆಕಾಂಕ್ಷಾ (ಸಂದೇಹ, ಪೂರ್ವಪಕ್ಷ); ನಿರಾಕಾಂಕ್ಷಾ (ಸಂದೇಹವಿಲ್ಲದೇ ಇರೋಣ); ಸಾಕಾಂಕ್ಷಾ (ಸಂದೇಹವುಳ್ಳ).

**ಕಾಚ್** ಕ್ರಿ. (ಹೊಳೆ). ಕಾಚ [ಕಾಜು]; ಕಾಂಚನ (ಬಂಗಾರ), [ಕಂಚಾಣ]; ಕಾಂಚಿ (ಹೊಳೆಯುವಂಥ, ಶೋಭಿಸುವಂಥ ಆಭರಣ); ನಿಷ್ಕಾಂಚನ (ಬಂಗಾರಿಲ್ಲದವ, ಬಡವ); ಸಕಾಂಚನ (ಬಂಗಾರುಳ್ಳವ).

**ಕಿಮ್** ಸ. (ಏನು) ಕಿಂಚಿತ್ (ಏನಾದರು); ಕಿಮಪಿ (ಅಪಿ=ಸಹ; ಏನು ಸಹ, ಏನೇನು); ಯತ್ಕಿಂಚಿತ್ (ಏನೇನು, ಎಷ್ಟು ಮಾತ್ರ).

**ಕೀಲ್** ಕ್ರಿ. (ಮೊಳೇ ಹೊಡೆ); ಕೀಲ; ಕೀಲಕ; ಕೀಲಿ.

**ಕು** ಕ್ರಿ. (ಶಬ್ದರಚನೆಯ ಮಾಡು). ಕವನ; ಕವಿ; ಕವಿತಾ; ಕವಿತ್ವ; ಕಾವ್ಯ; ಕುಕವಿ (ಕೆಟ್ಟ ಕವಿ); ಸತ್ಕವಿ; ಸುಕವಿ; ಮಹಾಕವಿ (ದೊಡ್ಡ ಕವಿ); ಶೀಘ್ರಕವಿ (ಕೂತ ಕೂತಲ್ಲೆ ಬೆಗನೆ ಕವಿತಾ ಮಾಡುವವ).

**ಕುಟ್** ಕ್ರಿ. (ಡೊಂಕಾಗು). ಕುಟಿಲ (ಡೊಂಕ, ಕೆಟ್ಟ ನಡಳೆಯು); ಕುಟ್ಮಲ (ಮೊಗ್ಗೆ).

**ಕುಠ್** ಕ್ರಿ. (ನಿಲ್ಲಿಸು). ಕುಂಠ; ಕುಂಠನ; ಕುಂಠಿತ; ಅಕುಂಠ (ನಿಲ್ಲಿಸಲಾಗದಂಥ, ಅಜಿಂಕ್ಯ); ಅಕುಂಠಿತ; ವಿಕುಂಠ.

**ಕುತ್ಸ್** ಕ್ರಿ. (ಜರಿ, ನಿಂದಿಸು). ಕುತ್ಸಕ; ಕುತ್ಸನ; ಕುತ್ಸಾ (ನಿಂದೆ); ಕುತ್ಸಿತ (ಜರಿಯ ತಕ್ಕ, ದೋಷ ಇಡ ತಕ್ಕ, ಕೆಟ್ಟ); ಅಕುತ್ಸಿತ (ಉತ್ತಮ).

ಕುಪ್ ಕ್ರಿ. (ಶಿಟ್ಟಾಗು). ಕುಪಿತ; ಕೋಪ; ಕೋಪನ (ಶಿಟ್ಟಿಗೇರುವವ); ಕೋಪೀ; ಪ್ರಕೋಪ; ವಿಕೋಪ; ವಿಕೋಪಿ; ಸಂಕೋಪ.

ಕೃ ಕ್ರಿ. (ಮಾಡು). ಕರ (ಮಾಡುವ ಸಾಧನ, ಕೈ); ಕರಣ (ಸಾಧನ); ಕರ್ತೃ (ಮಾಡುವವ); ಕರ್ಮ (ಮಾಡೋಣ); ಕಾರಣ; ಕಾರ್ಯ; ಕೃತಿ (ಮಾಡುವ ರೀತಿ); ಕೃತ್ಯ; ಕೃತ್ರಿಮ (ಮಾಡಿದ); ಕ್ರಿಯಾ; ಅನುಕರಣ (ಒಬ್ಬನಂತೆ ಮತ್ತೊಬ್ಬ ಮಾಡೋಣ); ಅನುಕಾರ; ಅಧಿಕಾರ; ಅಪಕಾರ (ಕೆಡಕು ಮಾಡೋಣ); ಆಕಾರ (ಮಾಟ); ಆಕೃತಿ; ಉಪಕಾರ (ಒಳಿತು ಮಾಡೋಣ); ಉಪಕೃತಿ; ನಿಕಾರ; ಪ್ರಕಾರ; ಪ್ರಕೃತಿ; ಪ್ರಾಕೃತ (ಪ್ರಕೃತಿಯ ಸಂಬಂಧವುಳ್ಳ); ಬಹಿಷ್ಕಾರ (ಬಹಿರ್=ಹೊರಗೆ; ಕುಲದ ಹೊರಗೆ ಮಾಡೋಣ); ವಿಕಾರ (ಭೇದ ಮಾಡೋಣ); ವ್ಯಾಕರಣ (ಶಬ್ದಗಳನ್ನು ಭೇದ ಮಾಡುವ ಶಾಸ್ತ್ರ); ಸಂಕರ (ಒತ್ತಟ್ಟು ಮಾಡೋಣ, ಬೆರಿಕೆ); ಸತ್ಕಾರ (ಆದರ ಮಾಡೋಣ); ಸಂಸ್ಕಾರ (ಭಾವನೆ ತಿದ್ದುವಿಕೆ); ಸಂಸ್ಕೃತ (ತಿದ್ದಿದ, ಸುಧಾರಿಸಿದ); ಸ್ವೀಕಾರ (ಸ್ವ=ತಾನು; ತನ್ನದೆಂದು ಮಾಡೋಣ, ಗ್ರಹಿಸೋಣ).

ಕೃತ್ ಕ್ರಿ. (ಕಡಿ). ಕರ್ತನ; ಕರ್ತರೀ [ಕತ್ತರಿ]; ಕರ್ತಿತ; ವಿಕರ್ತನ (ಹೊತ್ತು ಕಡಿಯುತ್ತಾ, ಅರ್ಥಾತ್ ಕಡಿಮೆ ಮಾಡುತ್ತಾ ಹೋಗುವವ, ಸೂರ್ಯ); ವೈಕರ್ತನಿ (ಸೂರ್ಯನ ಮಗ, ಕರ್ಣ); ಸಂಕರ್ತನ.

ಕೃಪ್ ಕ್ರಿ. (ದಯೆ ಮಾಡು, ಲೋಭ ಮಾಡು). ಕೃಪಣ (ದ್ರವ್ಯದ ಮೇಲೆ ಬಹು ಲೋಭ ಮಾಡುವವ); ಕೃಪಾ; ಕೃಪಾಲು; ಕಾರ್ಪಣ್ಯ (ಜೀನತನ); ನಿಷ್ಕೃಪಣ (ಉದಾರ).

ಕೃಶ್ ಕ್ರಿ. (ಬಣಗು, ಸಣ್ಣಾಗು). ಕರ್ಶಿತ; ಕಾರ್ಶ್ಯ (ಬಡಕತನ); ಕೃಶ (ಬಡಕ); ಅರ್ಥಕಾರ್ಶ್ಯ (ಅರ್ಥ=ದುಡ್ಡು; ಬಡತನ).

ಕೄ ಕ್ರಿ. (ಬೀರು, ಹಬ್ಬು). ಕಿರಣ; ಆಕೀರ್ಣ (ಬೀರಿದ, ಹಬ್ಬಿದ); ಪ್ರಕೀರ್ಣ; ವಿಕೀರ್ಣ (ಪಸರಿಸಿದ); ಸಂಕೀರ್ಣ (ಕಲೆತು ಹೋದ, ಮಿಶ್ರ, ಬೆರತ).

**ಕೃತ್** ಕ್ರಿ. (ಸ್ತುವಿಸು). ಕೀರ್ತನ; ಕೀರ್ತಿ; ಕೀರ್ತಿಮಾನ್; ಅಕೀರ್ತಿ; ಅಪಕೀರ್ತಿ; ದುಷ್ಕೀರ್ತಿ; ಸಂಕೀರ್ತನ (ಹಲವರು ಒತ್ತಟ್ಟಿಗೆ ಕೂಡಿ ಮಾಡುವ ಸ್ತವನ).

**ಕ್ಲಪ್** ಕ್ರಿ. (ಸಮರ್ಥನಾಗು). ಕಲ್ಪ; ಕಲ್ಪಕ; ಕಲ್ಪನಾ; ಕಲ್ಪಿತ; ಕ್ಲಪ್ತಿ (ನೆನೆಪು); ವಿಕಲ್ಪ; ಸಂಕಲ್ಪ; ಸಂಕಲ್ಪಿತ.

**ಕ್ರದ್** ಕ್ರಿ. (ಅಳು). ಕ್ರಂದನ; ಕ್ರಂದಿತ; ಆಕ್ರಂದಿತ; ವಿಕ್ರಂದನ; ವಿಕ್ರಂದಿತ.

**ಕ್ರಮ್** ಕ್ರಿ. (ಹೋಗು). ಕ್ರಮ; ಕ್ರಮಣ; ಕ್ರಮಿಕ (ಕ್ರಮದಿಂದ ಹೋಗುವ); ಕ್ರಾಂತಿ; ಅತಿಕ್ರಮ (ಮೀರಿ ಹೋಗೋಣ), ಅನುಕ್ರಮ (ಒಂದರ ಹಿಂದೆ ಒಂದು ಹೋಗೋಣ); ಅಪಕ್ರಮ (ಕೆಟ್ಟು ಹೋಗೋಣ); ಉಪಕ್ರಮ (ಸಮೀಪ ಹೋಗೋಣ, ಆರಂಭಿಸೋಣ); ನಿಷ್ಕ್ರಮಣ (ಹೊರಗೆ ಹೋಗೋಣ); ಪರಾಕ್ರಮ; ವಿಕ್ರಮ; ಸಂಕ್ರಮ (ಕೂಡಿ ಹೋಗೋಣ); ಸಂಕ್ರಾಂತಿ.

**ಕ್ರೀ** ಕ್ರಿ. (ಕೊಳ್ಳು) ಕ್ರಯ; ಕ್ರೇತಾ (ಕೊಳ್ಳುವವ); ಕ್ರೇಯ (ಕೊಳ್ಳ ತಕ್ಕ); ಅಕ್ರೀತ; ವಿಕ್ರಯ (ಕೊಂಡದ್ದು ತಿರಿಗಿ ಕೊಡೋಣ, ಮಾರಾಟ); ವಿಕ್ರೀತ; ವಿಕ್ರೇತಾ.

**ಕ್ರೀಡ್** ಕ್ರಿ. (ಆಡು). ಕ್ರೀಡನ; ಕ್ರೀಡಾ; ಕ್ರೀಡಿತ.

**ಕ್ರುಧ್** ಕ್ರಿ. (ಶಿಟ್ಟಾಗು). ಕ್ರುದ್ಧ; ಕ್ರೋಧ; ಕ್ರೋಧನ (ಬಲುಬೇಗ ಶಿಟ್ಟಿಗೇಳುವವ); ಅಕ್ರೋಧ; ಅಕ್ರೋಧನ (ಶಾಂತ); ಸಂಕ್ರುದ್ಧ (ಬಹು, ಶಿಟ್ಟಾದ).

**ಕ್ರುಶ್** ಕ್ರಿ. (ಅಳು) ಕ್ರೋಶ; ಕ್ರೋಶಿತ; ಆಕ್ರೋಶ; ವಿಕ್ರೋಶ.

**ಕ್ಲಿಶ್** ಕ್ರಿ. (ದುಃಖಬಡು). ಕ್ಲಿಷ್ಟ; ಕ್ಲೇಶ; ಕ್ಲೇಶಿತ; ಅಕ್ಲಿಷ್ಟ; ಅಕ್ಲೇಶ (ದುಃಖಬಡದೆ); ನಿಷ್ಕ್ಲೇಶ; ವಿಕ್ಲೇಶ; ಸಂಕ್ಲೇಶ.

ಕ್ಷಣ್ ಕ್ರಿ. (ಹೊಡೆ, ಘಾಯ ಮಾಡು). ಕ್ಷತ (ಘಾಯ); ಕ್ಷತ್ರ; ಕ್ಷತ್ರಿಯ.

ಕ್ಷಮ್ ಕ್ರಿ. (ತಾಳು). ಕ್ಷಮಾ (ತಾಳ್ಮೆ); ಕ್ಷಮಿ; ಕ್ಷಾಂತ (ತಾಳ್ಮೆಯುಳ್ಳ); ಕ್ಷಾಂತಿ; ಅಕ್ಷಾಂತಿ (ಅಸೂಯೆ; ಈರ್ಷೆ).

ಕ್ಷರ್ ಕ್ರಿ. (ಸೋರು). ಕ್ಷರ (ಸೋರುವ, ಕೆಡುವ, ನಾಶ ಹೊಂದುವ); ಕ್ಷರಣ; ಕ್ಷಾರ, [ಕಾರ]; ಅಕ್ಷರ (ಅವಿನಾಶಿಯಾದ).

ಕ್ಷಲ್ ಕ್ರಿ. (ತೊಳೆ). ಕ್ಷಾಲನ; ಕ್ಷಾಲಿತ; ಪ್ರಕ್ಷಾಲನ (ತೊಳೆಯೋಣ).

ಕ್ಷಿ ಕ್ರಿ. (ಸೊರಗು). ಕ್ಷಯ (ಸೊರಗೋಣ, ಶಕ್ತಿ ಕುಂದೋಣ); ಕ್ಷಯಿಾ; ಕ್ಷೀಣ; ಅಕ್ಷಯ (ಸೊರಗದ, ನಾಶವಾಗದ, ಯಾವಾಗಲು ಇರುವ).

ಕ್ಷಿಪ್ ಕ್ರಿ. (ಚಲ್ಲು, ಒಗೆ). ಕ್ಷಿಪ್ತ; ಕ್ಷೇಪಣ; ಆಕ್ಷೇಪ (ನಡುವೆ ಚಲ್ಲೋಣ, ಅಡ್ಡೀ ತರೋಣ); ನಿಕ್ಷೇಪ (ಇಟ್ಟ ಗಂಟು); ವಿಕ್ಷಿಪ್ತ (ನಾಲ್ಕು ಕಡೆ ಚಲ್ಲಿದ ಬುದ್ಧಿಯುವ, ಭ್ರಾಂತ); ಸಂಕ್ಷಿಪ್ತ; ಸಂಕ್ಷೇಪ (ಬಹಳ ಇದ್ದದ್ದು ಸ್ವಲ್ಪದರಲ್ಲಿ ತಂದು ಚಲ್ಲೋಣ); ಕಾಲಕ್ಷೇಪ (ಕಾಲ=ಹೊತ್ತು; ಕ್ಷೇಪ=ಹಾಕೋಣ; ಹೊತ್ತು ಹಾಕೋಣ).

ಕ್ಷುಧ್ ಕ್ರಿ. (ಹಸಿವೆಯಾಗು). ಕ್ಷುತ್ (ಹಸಿವೆ); ಕ್ಷುಧಾ; ಕ್ಷುಧಿತ.

ಕ್ಷುಭ್ ಕ್ರಿ. (ಹುಚ್ಚಾಗು, ಶಿಟ್ಟಾಗು). ಕ್ಷುಬ್ಧ (ಶಿಟ್ಟಾದ); ಕ್ಷೋಭ; ಕ್ಷೋಭಿ; ಪ್ರಕ್ಷೋಭ (ಹೆಚ್ಚಾದ ಶಿಟ್ಟು); ವಿಕ್ಷೋಭ; ಸಂಕ್ಷೋಭ; ಗುರುಕ್ಷೋಭ; ದೇವತಾಕ್ಷೋಭ.

ಕ್ಷುರ್ ಕ್ರಿ. (ಕೊಯ್ಯು). ಕ್ಷುರ (ತಲೇ ಮಾಡುವ ಕತ್ತಿ); ಕ್ಷೌರ (ತಲೇ ಮಾಡಿಸೋಣ); ಕ್ಷೌರೀ.

ಖಡ್ ಕ್ರಿ. (ಕಡಿ, ಚೂರು ಮಾಡು). ಖಂಡ (ತುಣುಕು, ಚೂರು); ಖಂಡನ; ಖಂಡಿತ (ಕಡಿದ; ಇದರ ಮೇಲಿಂದಲೇ, ಸಂಶಯವುಳ್ಳಿಯದ); ಖಡ್ಗ (ಕಡಿಯುವ ಶಸ್ತ್ರ, ಕತ್ತಿ), ಅಖಂಡ; ಮಾನಖಂಡನ (ಮಾನ=ಯೋಗ್ಯತೆ).

**ಖನ್** ಕ್ರಿ. (ಅಗಿ, ತೋಡು). ಖನಿ (ಲೋಹಗಳನ್ನು ಅಗಿದು ತಗೆಯುವ ಸ್ಥಳ); ಖನಿಜ (ಜ, ಜನ್=ಹುಟ್ಟು; ಖನಿಯಲ್ಲಿ ಹುಟ್ಟುವ, ಧಾತು); ಖಾತ (ಅಗಿದ); ಆಖಾತ; ಉತ್ಖಾತ (ಅಗಿದು ಮೇಲಕ್ಕೆ ತಗೆದ); ನಿಖಾತ (ನೆಲದೊಳಗೆ ಅಗಿದದ್ದು).

**ಖರ್ಜ್** ಕ್ರಿ. (ತುರಿಸು). ಖರ್ಜನ್; ಖರ್ಜೂರ [ಖಜ್ಜಿ].
**ಖಾದ್** ಕ್ರಿ. (ತಿನ್ನು). ಖಾದಕ (ತಿನ್ನುವವ); ಖಾದನ; ಖಾದ್ಯ [ಕಜ್ಜಾಯ].

**ಖಿದ್** ಕ್ರಿ. (ಮನಗೆಡು) ಖಿನ್ನ; ಖೇದ (ದುಃಖ).

**ಖ್ಯಾ.** ಕ್ರಿ. (ಹೇಳು). ಖ್ಯಾತಿ (ಹೇಳಿಕೆ, ಕೀರ್ತಿ); ಆಖ್ಯಾ (ಹೆಸರು); ಆಖ್ಯಾನ (ಕಥೇ ಹೇಳೋಣ); ಆಖ್ಯಾಯಿಕಾ (ಹೇಳಿಕೇ ಮಾತು, ದಂತಕಥೆ); ಪ್ರಖ್ಯಾತ; ಪ್ರಖ್ಯಾತಿ; ವಿಖ್ಯಾತ; ವಿಖ್ಯಾತಿ; ವ್ಯಾಖ್ಯಾನ (ಯಾವದಾದರೊಂದು ವಿಷಯುವನ್ನು ಕುರಿತು ವಿವರಿಸಿ ಹೇಳೋಣ); ಸಂಖ್ಯಾ (ಕೂಡಿಸಿ ಹೇಳುವಿಕೆ, ಒಟ್ಟು).

**ಗಣ್** ಕ್ರಿ. (ಎಣಿಸು). ಗಣ; ಗಣಕ (ಎಣಿಸುವವ, ಜೋಯಿಸ); ಗಣನಾ; ಗಣಿತ; ಅಗಣಿತ (ಎಣಿಕೇ ಮೀರಿದ); ಅವಗಣನಾ (ಕೆಳಗೆ ಎಣಿಸೋಣ, ಅರ್ಥಾತ್ ಅಪಮಾನ).

**ಗದ್** ಕ್ರಿ. (ಮಾತಾಡು). ಗದಿತ; ಗದ್ಯ (ವಾಕ್ಯಾತ್ಮಕ ಗ್ರಂಥರಚನೆ).

**ಗಮ್** ಕ್ರಿ. (ಹೋಗು). ಗತ; ಗತಿ; ಗಮನ; ಅಧಿಗತ (ಯಾವದೊಂದು ಮಾತಿನೊಳಗೆ ಒಳ್ಳೆ ತನಕ ಹೊಕ್ಕುವ, ತಿಳಿಕೊಂಡವ); ಅಧಿಗಮ; ಆಗಮ (ಪರಂಪರೆಯಿಂದ ಬಂದ ಜ್ಞಾನ); ಜಂಗಮ (ಯಾವಾಗಲು ಹೋಗುವ, ನಡೆಯುವವ, ಸ್ಥಾವರವಾಗದ); ಸಂಗತಿ (ಕೂಡಿ ಹೋಗೋಣ, ಗೆಳೆತನ); ಸಂಗಮ (ಒತ್ತಟ್ಟು ಕೂಡೋಣ); ಸದಾಗತಿ (ಯಾವಾಗಲು ಹೋಗುವದು, ಗಾಳಿ).

**ಗರ್ಜ್** ಕ್ರಿ. (ಸದ್ದರಿಸು). ಗರ್ಜನ; ಗರ್ಜನಾ; ಗರ್ಜಿತ.

ಗರ್ವ್ ಕ್ರಿ. (ಹೆಮ್ಮೆ ಮಾಡು). ಗರ್ವ; ಗರ್ವಿತ; ಗರ್ವಿಷ್ಠ; ನಿಗರ್ವಿ (ಹೆಮ್ಮೆ ಇಲ್ಲದವ, ಸುಜನ); ಸಗರ್ವ.

ಗಲ್ ಕ್ರಿ. (ಜಾರಿ ಹೋಗು, ಬೀಳು). ಗಲ (ಗಂಟಲು); ಗಲಿತ (ಉದುರಿ ಬಿದ್ದ); ಗಾಲನ; [ಗಾಣ]; ಗಾಲಿತ; ನಿರ್ಗಲಿತ; ವಿಗಲಿತ.

ಗುಣ್ ಕ್ರಿ. (ಎಣಿಸು). ಗುಣ (ಮನುಷ್ಯನಲ್ಲಾಗಲಿ ಪದಾರ್ಥಗಳಲ್ಲಾಗಲಿ ಇದ್ದ ವಿಶೇಷ ಧರ್ಮ); ಗುಣಕ; ಗುಣೀ; ಗುಣ್ಯ; ದುರ್ಗುಣ; ಸುಗುಣ; ಸದ್ಗುಣ; ತ್ರಿಗುಣ (ಸತ್ವ, ರಜ, ತಮ ಎಂಬ ಮೂರು ಗುಣಗಳು).

ಗುಪ್ ಕ್ರಿ. (ಕಾಯು, ಜೋಕೆ ಮಾಡು). ಗೋಪ (ಕಾಯುವವ); ಗೋಪಕ; ಗೋಪನ (ಸಾಕೋಣ); ಗೋಪ್ತಾ; ಸಂಗೋಪನ (ಚನ್ನಾಗಿ ಜೋಕೆ ಮಾಡೋಣ).

ಗುಪ್ ಕ್ರಿ. (ಅಡಗಿಸು). ಗುಪ್ತ, [ಗುಟ್ಟು]; ಗೋಪನ; ಗೋಪನೀಯ.

ಗುಫ್ ಕ್ರಿ. (ಪೋಣಿಸು). ಗುಂಫಕ; ಗುಂಫನ; ಗುಂಫಿತ.

ಗುಹ್ ಕ್ರಿ. (ಅಡಗಿಸು). ಗುಹಾ (ಗವಿ); ಗುಹ್ಯ (ಅಡಗಿಸ ತಕ್ಕ ವಸ್ತು); ಗೂಢ (ಅಡಗಿದ, ಮುಚ್ಚಿದ).

ಗೈ ಕ್ರಿ. (ಹಾಡು) ಗಾನ; ಗಾಯಕ; ಗಾಯನ; ಗೀತ; ಗೀತಿ; ಸಂಗೀತ.

ಗೋ ನಾ. (ಆಕಳು). ಗೋಪ; ಗೋಪಾಲ; ಗೋಷ್ಠ (ಸ್ಥಾ=ನಿಲ್ಲು; ಆಕಳ ಕಟ್ಟುವ ಸ್ಥಳ); ಗವಾಕ್ಷ (ಗೋ+ಅಕ್ಷಿ=ಕಣ್ಣು; ಆಕಳ ಕಣ್ಣಿನಷ್ಟು ಬೆಳಕಿಂಡಿ); ಗೋಮಯ; ಗೋರಸ (ಆಕಳ ಹಾಲು ಮುಂತಾದ್ದು); ಗೋರೋಚನ.

ಗ್ರಥ್ ಕ್ರಿ. (ಕಟ್ಟು, ಪೋಣಿಸು, ರಚಿಸು). ಗ್ರಥನ (ಕಟ್ಟುವಿಕೆ, ರಚನೆ); ಗ್ರಂಥ (ರಚನೆ, ಪ್ರಬಂಧ); ಗ್ರಂಥಿ, [ಗಂಟು]; ಗ್ರಂಥಕರ್ತಾ; ಗ್ರಂಥಕಾರ.

**ಗ್ರಸ್** ಕ್ರಿ. (ತಿನ್ನು). ಗ್ರಸ್ತ (ತಿಂದ, ನುಂಗಿದ); ಗ್ರಸನ; ಗ್ರಾಸ (ತುತ್ತು); ಸುಗ್ರಾಸ (ಚಲೋ ತಿನಸು).

**ಗ್ರಹ್** ಕ್ರಿ. (ಹಿಡಿ, ತಕ್ಕೊಳ್ಳು). ಗ್ರಹಣ (ಹಿಡಿಯೋಣ, ಹಿಡತ); ಗ್ರಾಹಕ (ತಕ್ಕೊಳ್ಳುವವ), [ಗಿರಾಯಿಕ]; ಗ್ರಾಹ್ಯ; ಅನುಗ್ರಹ; ಆಗ್ರಹ; ನಿಗ್ರಹ (ಬಿಗಿ ಹಿಡಿಯೋಣ); ಪ್ರಗ್ರಹ, [ಹಗ್ಗ]; ವಿಗ್ರ ಹ (ಬೇರೆ ತಕ್ಕೊಳ್ಳೋಣ, ಬಿಡಿಸೋಣ); ಸಂಗ್ರಹ (ಕೂಡಿ ಹಾಕೋಣ).

**ಗ್ರಾಮ್** ಕ್ರಿ. (ಒತ್ತಟ್ಟು ಕೂಡಿರು). ಗ್ರಾಮ (ಹಳ್ಳಿ); ಗ್ರಾಮಣೀ (ಊರಿಗೆ ಪ್ರಮುಖನಾದವ); [ಗಾವಳಿ, ಗಾವುಳ, ಗಾವುಡ, ಗೌಡ;] ಗಾಮಣ್ಯ; ಗ್ರಾಮ್ಯ; ಸಂಗ್ರಾಮ.

**ಗ್ಲೈ** ಕ್ರಿ. (ಕ್ಷೀಣವಾಗು). ಗ್ಲಾನ; ಗ್ಲಾನಿ.

**ಘಟ್** ಕ್ರಿ. (ಆಗು, ಆಗಿ ಬರು, ಕೂಡಿ ಬರು). ಘಟ; ಘಟಕ [ಗಡಿಗೆ]; ಘಟನಾ (ಆಗಿ ಬರೋಣ); ಘಟಿಕಾ [ಘಳಿಗೆ]; ಘಟಿತ (ಆಗಿ ಬಂದ, ಕೂಡಿ ಬಂದ); ವಿಘಟನ (ಕೂಡಿ ಬಾರದೆ ಹೋಗೋಣ, ಅಗಲೋಣ); ವಿಘಟಿತ; ಸಂಘಟನ; ಸಂಘಟಿತ.

**ಘುಷ್** ಕ್ರಿ. (ಕೂಗು). ಘೋಷ; ಘೋಷಣಾ; ಘೋಷಿತ; ಅಘೋಷ (ಶಬ್ದವಿಲ್ಲದ, ಮೂಕ); ನಿರ್ಘೋಷ (ಘಟ್ಟಿಯಾದ ಕೂಗು); ಸಂಘೋಷ.

**ಘೃ** ಕ್ರಿ. (ಉಗ್ಗು). ಘೃತ (ಅನ್ನದ ಮೇಲೆ ಉಗ್ಗ ತಕ್ಕ ಪದಾರ್ಥ, ತುಪ್ಪ); ಅಭಿಘಾರ.

**ಘೃಷ್** ಕ್ರಿ. (ತೇಯು). ಘರ್ಷ; ಘರ್ಷಣ; ಘೃಷ್ಟ (ತೇದ); ಸಂಘರ್ಷಣ.

**ಘ್ರಾ** ಕ್ರಿ. (ಮೂಸಿ ನೋಡು). ಘ್ರಾಣ (ಮೂಗು); ಆಘ್ರಾಣ (ಮೂಸಿ ನೋಡೋಣ); ಆಘ್ರಾತ (ಮೂಸಿ ನೋಡಿದ).

**ಚಂಡ್** ಕ್ರಿ. (ಶಿಟ್ಟಾಗು). ಚಂಡ (ತೀಕ್ಷ್ಣ: ಶಿಟ್ಟಿನವ); ಚಂಡಿ; ಚಂಡಿತನ; ಪ್ರಚಂಡ (ಬಹಳ ತೀಕ್ಷ್ಣ).

**ಚತುರ್** ವಿ. (ನಾಲ್ಕು). ಚತುರ (ನಾಲ್ಕು ಕಡೆ ಓಡಾಡಿದವ, ಜಾಣ); ಚಾತುರ; ಚಾತುರೀ; ಚಾತುರ್ಯ; ಚತುರ್ಮುಖ (ಮುಖ=ಮೋರೆ; ಬ್ರಹ್ಮ); ಚತುರ್ವೇದ; ಚತುಃಶಾಸ್ತ್ರ.

**ಚರ್** ಕ್ರಿ. (ತಿರಗು); ಚರಣ; ಚರಿತ್ರ (ಜನ್ಮದಲ್ಲಿ ತಿರಗಿದ, ಅಂದರೇನು, ಘಟಿಸಿದ ಸಂಗತಿಗಳ ವೃತ್ತ); ಚಾರ (ಊರಿಂದ ಊರಿಗೆ ಸುದ್ದೀ ಒಯ್ಯುವವ); ಆಚಾರ (ಒಳ್ಳೇ ನಡತೆ); ಆಚಾರ್ಯ (ನಡತೇ ಕಲಿಸುವವ, ಗುರು); ಪರಿಚಾರಕ (ಯಜಮಾನನ ಬಳಿಯಲ್ಲಿ ಅಪ್ಪಣೆಗೆ ಸಿದ್ಧನಾಗಿ ನಿಂತವ, ಸೇವಕ); ಪ್ರಚಾರ; ವಿಚಾರ; ಸಂಚಾರ; ಗೋಚರ (ಗೋ=ಕಣ್ಣು; ಕಣ್ಣಿಗೆ ಬೀಳುವದು); ನಿಶಾಚರ (ನಿಶಾ=ಇರುಳು; ಇರುಳು ತಿರಗುವವ, ರಾಕ್ಷಸ); ರಾತ್ರಿಚರ; ವಾರಿಚರ (ವಾರಿ=ನೀರು; ನೀರೊಳಗೆ ತಿರಗಾಡುವ ಜಂತು).

**ಚರ್ಚ್** ಕ್ರಿ. (ವಾದ ಮಾಡು). ಚರ್ಚಕ; ಚರ್ಚಾ; ಚರ್ಚಿತ.

**ಚರ್ವ್** ಕ್ರಿ. (ಹಲ್ಲಿಲಿ ಅಗಿದು ತಿನ್ನು). ಚರ್ವಣ; ಚರ್ವಿತ; ಚರ್ವಿತಚರ್ವಣ (ತಿಂದದ್ದನ್ನೇ ತಿರಗಿ ತಿನ್ನೋಣ, ಮೆಲಕಾಡೋಣ. ಇದರ ಮೇಲಿಂದ ಮಾಡಿದ್ದೇ ಮಾಡೋಣ, ಇಲ್ಲವೆ ಅಂದದ್ದೇ ಅನ್ನೋಣ, ಎಂಬ ಅರ್ಥವು ಉಂಟಾಗಿದೆ).

**ಚಲ್** ಕ್ರಿ. (ಹೋಗು). ಚಲ; ಚಲನ; ಚಲಿತ; ಚಾಲನ (ಅಲ್ಲಾಡಿಸೋಣ, ತಿರಿವಿ ಹಾಕೋಣ); ಚಾಲನಾ; ಚಾಲನೀ (ಜರಡಿ); ಅಚಲ (ಹೋಗದ, ಸ್ಥಿರ); ಚಂಚಲ; ನಿಶ್ಚಲ; ಪ್ರಚಲ (ಬೇಗ ಹೋಗುವ).

**ಚಿ** ಕ್ರಿ. (ಕೂಡಿ ಹಾಕು). ಚಯನ; ಚಿತಾ; ನಿಶ್ಚಯ; ನಿಶ್ಚಿತ; ಪರಿಚಯ (ಗುರ್ತು); ಪರಿಚಿತಿ; ಸಂಚಯ (ಕೂಡಿ ಹಾಕೋಣ), ಸಂಚಿತ.

**ಚಿತ್** ಕ್ರಿ. (ನೆನಿಸು). ಚಿಂತನ; ಚಿಂತನಾ; ಚಿಂತಾ; ಚಿಂತಿತ; ಚಿಂತ್ಯ; ನಿಶ್ಚಿಂತ (ಚಿಂತೆಯಿಲ್ಲದ); ಸಂಚಿತನ.

**ಚಿತ್** ಕ್ರಿ. (ತಿಳಿ). ಚಿತ್ತ; ಚೇತನ; ಚೇತನಾ (ತಿಳಿವಳಿಕೆ, ಬೋಧ); ಚೈತನ್ಯ; ಅಚೇತನ; ವಿಚೇತನ, ಸಚೇತನ.

**ಚಿರ** ಅ. (ಬಹಳ ದಿನ). ಚಿರಕಾಲ; ಚಿರಂಜೀವ (ಚಿರಂ, ಬಹು ದಿನ; ಜೀವ, ಅಂದರೆ ಬದುಕಿರು, ಎಂಬ ಆಶೀರ್ವಾದವು ಮೂಲಾರ್ಥವು; ಅಂದರೆ ಮುಂದೆ ಕ್ರಮೇಣ ಆ ಆಶೀರ್ವಾದಕ್ಕೆ ಯೋಗ್ಯನಾದವನು, ಅರ್ಧಾತ್, ಮಗನು ಎಂಬ ಅರ್ಥ ಬಂತು). ಚಿರಂತನ (ಬಹು ದಿವಸದ); ಚಿರಪ್ರಾಯ.

**ಚುರ್** ಕ್ರಿ. (ಕದಿ). ಚೋರ (ಕಳ್ಳ); ಚೋರಣ; ಚೌರ್ಯ.

**ಚುಷ್** ಕ್ರಿ. (ಸೀಪು). ಚೋಷಣ; ಚೋಷಿತ; ಚೋಷ್ಯ.

**ಚೇಷ್ಟ್** ಕ್ರಿ. (ಅಲ್ಲಾಡು). ಚೇಷ್ಟನ; ಚೇಷ್ಟಾ; ಚೇಷ್ಟಿತ; ನಿಶ್ಚೇಷ್ಟ (ಸುಮ್ಮನೆ ಬಿದ್ದ); ಸಚೇಷ್ಟ (ಅಲ್ಲಾಡುವ).

**ಚ್ಯು** ಕ್ರಿ. (ಬೀಳು). ಚ್ಯುತ; ಚ್ಯುತಿ; ಪದಚ್ಯುತ (ತನ್ನ ಸ್ಥಾನದಿಂದ ಬಿದ್ದವ, ಸ್ಥಾನ ತಪ್ಪಿದವ); ರಾಜಚ್ಯುತ.

**ಛದ್** ಕ್ರಿ. (ಮುಚ್ಚು). ಛದ (ಎಲೆ); ಛತ್ರ [ಸತ್ತಿಗೆ]; ಛನ್ನ (ಮುಚ್ಚಿದ); ಛದ್ಮ (ಮೋಸ, ಕಪಟ); ಛಾದನ; ಛಾದಿನೀ (ಮಂಟಪದ ಮೇಲೆ ಹಾಕುವ ಗುಡಾರ ಮುಂತಾದ್ದು, ಚಾಂದಿನಿ); ಆಚ್ಛಾದನ; ಆಚ್ಛಾದಿತ; ಪ್ರಚ್ಛಾದನ (ಮುಚ್ಚೋಣ).

**ಛಿದ್** ಕ್ರಿ. (ಕಡಿ). ಛಿನ್ನ; ಛಿದ್ರ (ತೂತು); ಛೇದ; ಛೇದಿತ; ಉಚ್ಛೇದ (ಮೂಲದಿಂದ ಕಡಿಯೋಣ); ವಿಚ್ಛೇದ (ತೀರ ಕಡಿಯೋಣ); ವಿಚ್ಛೇದನ; ಸಂಚ್ಛೇದ; ಸಂಚ್ಛೇದನ.

**ಛುರ್** ಕ್ರಿ. (ಕೊಯ್ಯು). ಛುರೀ [ಚೂರಿ]; ಛುರಿಕಾ.

ಜಟ್ ಕ್ರಿ. (ತೊಡಕು). ಜಟಾ [ಜಡಿ]; ಜಟಿಲ (ಜಡಿಗೂದಲದವ); ಧೂರ್ಜಟಿ (ಎತ್ತರಾದ ಜಡೆಯುವ, ಶಿವ).

ಜಡ್ ಕ್ರಿ. (ಚೇತನವಿಲ್ಲದಿರು). ಜಡ; ಜಡತಾ; ಜಾಡ್ಯ [ಜಡ್ಡು]; ಅಜಾಡ್ಯ (ಹಗರು).

ಜನ್ ಕ್ರಿ. (ಹುಟ್ಟು). ಜನಕ (ತಂದೆ); ಜನನ; ಜನನೀ (ತಾಯಿ); ಜನಿತ; ಜಂತು (ಪ್ರಾಣಿ); ಜನ್ಮ (ಹುಟ್ಟು); ಜಾತ; ಜಾತಿ; ಪ್ರಜಾ (ಹುಟ್ಟಿದವರು, ಜನರು).

ಜಲ್ಪ್ ಕ್ರಿ. (ಶಿಕ್ಕ ಹಾಗೆ ಮಾತಾಡು, ಬೊಗಳು). ಜಲ್ಪಕ; ಜಲ್ಪನಾ; ಜಲ್ಪಿತ.

ಜಾಗೃ ಕ್ರಿ. (ಎಚ್ಚರಿರು). ಜಾಗರ; ಜಾಗರಣ; ಜಾಗರೂಕ; ಜಾಗೃತ (ಎಚ್ಚರವುಳ್ಳವ); ಜಾಗೃತಿ; ಪ್ರಜಾಗರ.

ಜಿ ಕ್ರಿ. (ಗೆಲು). ಜಯ; ಜಯನ; ಜಯೀ; ಜಯ್ಯ; ಜಿತ; ಜೇತಾ (ಗೆಲುವವ); ಜೇಯ; ವಿಜಯ (ಗೆಲವು); ವಿಜಯೀ; ಪರಾಜಯ (ಸೋಲು); ಪರಾಜಿತ; ಜಗಜ್ಜಯ (ಜಗತ್=ಭೂಮಿ; ಯಾವತ್ತೂ ಭೂಮಿ ಜಯಿಸೋಣ); ದಿಗ್ಜಯ; ಮನೋಜಯ.

ಜೀವ್ ಕ್ರಿ. (ಬದಕು). ಜೀವ; ಜೀವನ; ಜೀವಿಕಾ; ಜೀವಿತ; ಅನುಜೀವಿ (ಆಶ್ರಯದಿಂದ ಬದುಕುವವ); ಉಪಜೀವನ; ಉಪಜೀವಿ; ನಿರ್ಜೀವ; ಸಜೀವ; ಸಂಜೀವನ (ಸತ್ತವನ ತಿರಿಗಿ ಬದುಕಿಸೋಣ); ಸಂಜೀವನೀ (ಸತ್ತವರನ್ನು ತಿರಿಗಿ ಬದುಕಿಸ ತಕ್ಕ ಔಷಧಿ).

ಜೃಭ್ ಕ್ರಿ. (ಆಕಳಿಸು, ಅರಳು); ಜೃಂಭನ; ಜೃಂಭಾ; ಜೃಂಭಿತ; ಉಜ್ಜೃಂಭಣ (ಅರಳೋಣ); ಉಜ್ಜೃಂಭಿತ.

ಜೄ ಕ್ರಿ. (ಹಳಿದಾಗು). ಜರಠ (ಮುಪ್ಪಿನವ); ಜರಾ (ಮುಪ್ಪು); ಜರ್ಜರ; ಜೀರ್ಣ (ಹಳಿದಾದ್ದು, ಪಕ್ವ); ಅಜೀರ್ಣ (ಅಪಕ್ವ, ಅರಿವೆ); ನಿರ್ಜರ (ಮುಪ್ಪಿಲ್ಲದವ, ದೇವತೆ).

**ಜ್ಞಪ್** ಕ್ರಿ. (ತಿಳಿಸು). ಜ್ಞಪ್ತಿ (ತಿಳಿವಳಿಕೆ); ಆಜ್ಞಪ್ತಿ; ವಿಜ್ಞಪ್ತಿ; (ಅರಿಕೆ ಮಾಡೋಣ); ವಿಜ್ಞಾಪನ [ಬಿನ್ನಹ].

**ಜ್ಞಾ** ಕ್ರಿ. (ಅಪ್ಪಣೇ ಮಾಡು). ಅನುಜ್ಞಾ; ಅವಜ್ಞಾ (ಅಪ್ಪಣೇ ಮೀರೋಣ); ಆಜ್ಞಾ; ಆಜ್ಞಾಪನ; ಆಜ್ಞಾಪಿತ.

**ಜ್ಞಾ** ಕ್ರಿ. (ತಿಳಿ). ಜ್ಞಾತ; ಜ್ಞಾನ; ಜ್ಞಾನಿ [ಜಾಣ]; ಅಜ್ಞ; ಅಜ್ಞಾನ; ಅಭಿಜ್ಞ (ಚನ್ನಾಗಿ ತಿಳಿದವ); ಅಭಿಜ್ಞಾನ (ತಿಳಿವಳಿಕೆ, ಗುರ್ತು); ಪ್ರಜ್ಞಾ (ತಿಳಿಯುವ ಶಕ್ತಿ, ಎಚ್ಚರ); ಪ್ರತಿಜ್ಞಾ; ವಿಜ್ಞಾನ (ಒಳ್ಳೇ ಜ್ಞಾನ); ಸಂಜ್ಞಾ (ತಿಳಿವಳಿಕೇ ಸಾಧನ, ಗುರ್ತು, ಸೊನ್ನೆ).

**ಜ್ಯುತ್** ಕ್ರಿ. (ಪ್ರಕಾಶಿಸು). ಜ್ಯೋತಿ (ಪ್ರಕಾಶ, ನಕ್ಷತ್ರ); ಜ್ಯೋತಿಷ; ಜ್ಯೋತಿಷಿ [ಜೋಯಿಸ].

**ಜ್ವರ್** ಕ್ರಿ. (ಕಾಯು). ಜ್ವರ [ಜರ]; ಜ್ವರಿತ; ಜ್ವರೀ; ವಿಷಮಜ್ವರ; ಹಿಮಜ್ವರ (ಚಳಿಜರ).

**ಜ್ವಲ್** ಕ್ರಿ. (ಹೊತ್ತು, ಉರಿ). ಜ್ವಲನ (ಬೆಂಕಿ); ಜ್ವಲಿತ; ಜ್ವಾಲಾ (ಉರಿ); ಉಜ್ಜ್ವಲನ (ಶಿಕ್ಕಿ ಜಳಜಳ ಮಾಡೋಣ); ಪ್ರಜ್ವಲಿತ; ಪ್ರಜ್ವಾಲನ; ಸಂಜ್ವಲನ.

**ಟಂಕ್** ಕ್ರಿ. (ಕಟ್ಟು). ಟಂಕ; ಟಂಕನ; ಟಂಕಿತ.

**ಟೀಕ್** ಕ್ರಿ. (ಹೋಗು). ಟೀಕಾ (ಮೂಲಗ್ರಂಥದ ಅರ್ಥ ಮಾಡುತ್ತಾ ಹೋಗೋಣ, ವ್ಯಾಖ್ಯಾನ ಮಾಡೋಣ); ಟೀಕಾಕಾರ (ವ್ಯಾಖ್ಯಾನ ಮಾಡುವವ); ಸಟೀಕ (ವ್ಯಾಖ್ಯಾನ ಸಹಿತ).

**ಡ್ಯೈ** ಕ್ರಿ. (ಹಾರು). ಡಯನ; ಉಡ್ಡಾನ (ಹಾರೋಣ); ಉಡ್ಡೀನ.

**ತಟ್** ಕ್ರಿ. (ಕಟ್ಟು). ತಟ (ದಂಡೆ, ತೀರ); ತಟಾಕ (ಕೆರೆ); ತಟಿನೀ (ದಂಡೆಗಳ ನಡುವೆ ಹರಿಯುವದು, ಹೊಳೆ); ದೇವತಟಿನೀ (ಭಾಗೀರಥಿ).

ತಡ್ ಕ್ರಿ. (ಹೊಡೆ). ತಾಡಕ; ತಾಡನ; ತಾಡಿತ (ಹೊಡೆದ); ಸಂತಾಡನ (ಚನ್ನಾಗಿ ತಳಿಸೋಣ); ಸಂತಾಡಿತ.

ತತ್ ಸ. (ಅದು). ತತ್ವ (ಯಾವದೊಂದು ಮಾತಿನ ಭಾವ, ಅಥವಾ ಮರ್ಮ); ತಥಾ (ಅದರಂತೆ, ಹಾಗೆ); ತಥ್ಯ (ಇದ್ದ ಸ್ಥಿತಿ, ಸತ್ಯ); ತತ್ಕಾಲ (ಕಾಲ=ಹೊತ್ತು); ತತ್ಪರ (ಯಾವದೊಂದು ವಿಷಯದಲ್ಲಿ ಸೇರಿದವ); ತತ್ಸಮ (ಸಮ=ಸರಿ; ಅದಕ್ಕೆ ಸರಿ), ತದ್ಭವ (ಭವ=ಹುಟ್ಟಿದ; ಅದರಿಂದ ಹುಟ್ಟಿದ).

ತನ್ ಕ್ರಿ. (ಹಬ್ಬು). ತತಿ (ಹಬ್ಬುವಿಕೆ, ಗುಂಪು, ಸಮೂಹ); ತನಯ (ಮುಂದೆ ವಂಶ ಹಬ್ಬಿಸುವವ, ಮಗ); ತನು (ಶರೀರ); ತಂತು; ವಿತಾನ (ಮಂಟಪ); ಸಂತಾನ (ಹಬ್ಬುವಿಕೆ, ವಂಶ).

ತಮ್ ಕ್ರಿ. (ಕತ್ತಲೆ ಬೀಳು). ತಮಸ್ಸು (ಕತ್ತಲೆ); ತಾಮಸ (ಕತ್ತಲೆಯಲ್ಲಿ ಆಗ ತಕ್ಕ, ಕಳ್ಳತನದ, ದುಷ್ಟ); ತಾಮಸೀ (ಕೆಟ್ಟವ, ದುಷ್ಟ); ಅಂಧಂತಮಸ್ಸು (ಬಹಳೇ ಕತ್ತಲೆಯಾದ, ಘೋರ ನರಕ).

ತರ್ಕ್ ಕ್ರಿ. (ಕಲ್ಪಿಸು). ತರ್ಕ; ತರ್ಕಿತ; ತರ್ಕ್ಯ; ತಾರ್ಕಿಕ (ತರ್ಕ ಮಾಡುವವ, ನ್ಯಾಯಶಾಸ್ತ್ರ ಬಲ್ಲವ); ಅತರ್ಕ್ಯ (ತರ್ಕ ಮಾಡಲಾಗದ); ಕುತರ್ಕ; ವಿತರ್ಕ; ಸಂತರ್ಕ.

ತಿಜ್ ಕ್ರಿ. (ತಿಕ್ಕು, ಬೆಳಗು, ಮಸೆ); ತೇಜಸ್ಸು; ತೇಜಸ್ವೀ; ಉತ್ತೇಜಕ; ಉತ್ತೇಜನ; ನಿಸ್ತೇಜ; ಸತೇಜ.

ತುರ್ ಕ್ರಿ. (ಓಡು). ತುರಗ (ಕುದುರೆ); ತುರಂಗ; ತುರಂಗಮ; ತೂರ್ಣ (ಬೇಗ); ಆತುರ (ಅವಸರ).

ತುಲ್ ಕ್ರಿ. (ತೂಗು). ತುಲನಾ; ತುಲಾ (ತಕ್ಕಡಿ); ತುಲ್ಯ (ತಕ್ಕಡಿಯಲ್ಲಿ ಹಾಕಿ ತೂಗ ತಕ್ಕ, ಸಮತೂಕದ, ಸರೀಕ); ತೋಲನ; ತೋಲಿತ; ಅತುಲ (ತೂಕದಲ್ಲಿ ಸರಿಯಿಲ್ಲದ, ದೊಡ್ಡ).

ತೄ ಕ್ರಿ. (ಇಳಿ, ದಾಟು). ತರಣ; ತರಣಿ (ನಾವು); ತರಿ (ನಾವು); ತಾರಕ (ದಾಟಿಸುವ, ಪಾರ ಮಾಡುವ); ತಾರಣ; ಅವತರಣ (ದೇವತಾದಿಗಳು ಭೂಮಿಯ ಮೇಲೆ ಇಳಿದು ಬರೋಣ); ಅವತಾರ; ಅವತಾರೀ (ಅವತಾರ ಧರಿಸಿದವ).

ತೃಷ್ ಕ್ರಿ. (ನೀರಡಿಸು). ತೃಷಾ; ತೃಷಿತ (ನೀರಡಿಸಿದ); ತೃಷ್ಣಾ (ನೀರಡಿಕೆ, ಇದರ ಮೇಲಿಂದ ಲಾಕ್ಷಣಿಕವಾಗಿ: ದ್ರವ್ಯದ ಆಶೆ, ಲೋಭ); ಮೃಗತೃಷ್ಣಾ (ಮೃಗ=ಜಿಗರೆ; ಬೇಸಿಗೆಯಲ್ಲಿ ಅರಣ್ಯದಲ್ಲಿ ಮೃಗ ಮುಂತಾದವುಗಳಿಗೆ ಜಲಪ್ರವಾಹದಂತೆ ಕಾಂಬುವ ಸೃಷ್ಟಿ ಚಮತ್ಕಾರ; ಬಿಸಲ್ಗುದುರೆ, ಮೃಗಜಲ).

ತ್ಯಜ್ ಕ್ರಿ. (ಬಿಡು, ಕೊಡು). ತ್ಯಕ್ತ; ತ್ಯಾಗ; ತ್ಯಾಗೀ (ಕೊಡುವವ, ದಾನಶೂರ); ಪರಿತ್ಯಕ್ತ; ಪರಿತ್ಯಾಗ (ತೀರ ಬಿಟ್ಟು ಬಿಡೋಣ); ಸಂತ್ಯಕ್ತ; ಸಂತ್ಯಾಗ.

ತ್ರಸ್ ಕ್ರಿ. (ಅಂಜು, ಬೆದರು). ತ್ರಸನ; ತ್ರಾಸ; ತ್ರಾಸಕ; ತ್ರಾಸಿತ; ವಿತ್ರಸ್ತ; ವಿತ್ರಾಸ (ಹೆದರಿಕೆ); ಸಂತ್ರಾಸ.

ತ್ರಿ ವಿ. (ಮೂರು). ತೃತೀಯ; ತೃತೀಯಾ (ಮೂರನೇ ತಿಥಿ); ತ್ರಿಕರಣ (ಕರಣ=ಸಾಧನ; ಕಾಯ, ವಾಕ್, ಮನ ಎಂಬವು ಮೂರು ಕರಣಗಳು); ತ್ರಿಕಾಲ; ತ್ರಿಕೂಟ (ಮೂರು ಕೋಡುಗಲ್ಲುಗಳುಳ್ಳ ಬೆಟ್ಟ); ತ್ರಿಗುಣ (ಸತ್ವ ರಜ ತಮ ಎಂಬವು ಮೂರು ಗುಣಗಳು); ತ್ರಿಪಥಗಾ (ಪಥ=ಹಾದಿ; ಗಾ, ಗಮ್=ಹೋಗು; ಸ್ವರ್ಗ ಮೃತ್ಯು ಪಾತಾಳ ಎಂಬ ಮೂರು ಹಾದಿಗಳಿಂದ ಹರಿಯುವ ಹೊಳೆ, ಭಾಗೀರಥೀ); ತ್ರಿಲೋಕ (ಸ್ವರ್ಗ ಮೃತ್ಯು ಪಾತಾಳ ಎಂಬ ಮೂರು ಲೋಕಗಳು); ತ್ರಿವಾರ; ತ್ರಿವಿಕ್ರಮ (ವಿಕ್ರಮ=ಹೆಜ್ಜೆ; ಮೂರು ಹೆಜ್ಜೆಗಳಿಂದ ಬ್ರಹ್ಮಾಂಡವನ್ನು ವ್ಯಾಪಿಸಿದವ, ವಾಮನ); ತ್ರಿಶೂಲ; ತ್ರಿಸಂಧ್ಯ (ಸಂಧ್ಯಾ=ಸಂಜೆ; ಮೂರು ಸಂಜೆ).

ತ್ರೈ ಕ್ರಿ. (ಕಾಪಾಡು). ತ್ರಾಣ (ಕಾಪಾಡುವ ಶಕ್ತಿ ಸಾಮರ್ಥ್ಯ); ತ್ರಾತಾ (ಕಾಪಾಡುವವ); ನಿತ್ರಾಣ (ಶಕ್ತಿಯಿಲ್ಲದ, ಅಸಮರ್ಥ); ಪರಿತ್ರಾಣ (ಕಾಪಾಡುವಿಕೆ); ಪರಿತ್ರಾತ; ಸಂತ್ರಾಣ; ಸಂತ್ರಾತ.

ತ್ವರ್ ಕ್ರಿ. (ಓಡು). ತ್ವರಾ; ತ್ವರಿತ; ಸತ್ವರ (ಓಡುತ್ತಾ, ಬೇಗನೆ, ಶೀಘ್ರ).

ದಂಡ್ ಕ್ರಿ. (ಬಡಿ). ದಂಡ (ಬಡಿಯೋಣ, ಕೋಲು); ದಂಡನ; ದಂಡನೀಯ (ಬಡಿಯ ತಕ್ಕ); ದಂಡಿತ; ದಂಡ್ಯ; ಅದಂಡ್ಯ (ಶಿಕ್ಷೆಗೆ ಪಾತ್ರನಾಗದ).

ದಂಭ್ ಕ್ರಿ. (ಬಡಿವಾರ ಮಾಡು). ದಂಭ [ಜಂಭ]; ದಾಂಭಿಕ; ದಾಂಭಿಕತನ.

ದಮ್ ಕ್ರಿ. (ತಡೆ, ನಿಗ್ರಹಿಸು). ದಮ; ದಮನ; ದಮಿತ; ದಮೀ; (ಇಂದ್ರಿಯ ನಿಗ್ರಹ ಮಾಡಿದವ); ದಮ್ಯ; ದಾಮ (ಪಶು ಮುಂತಾದವುಗಳನ್ನು ನಿಗ್ರಹಿಸುವ ಸಾಧನ, ಹಗ್ಗ); ಉದ್ದಾಮ (ತಡೆಯಲಾಗದ, ಸೊಕ್ಕಿದ).

ದಯ್ ಕ್ರಿ. (ಕಾಪಾಡು). ದಯಾ; ದಯಾಲು; ದಯಿತ (ಕಾಪಾಡುವವ, ಗಂಡ); ದಯಿತಾ; ಅದಯ; ನಿರ್ದಯ; ಸದಯ.

ದಲ್ ಕ್ರಿ. (ಒಡೆ). ದಲ (ಎಸಳು); ದಲನ; ದಲಿತ (ಒಡೆದ); ನಿರ್ದಲನ (ಮುರಿಯೋಣ); ನಿರ್ದಲಿತ; ವಿದಲನ (ಎಸಳು ಬೇರೆ ಬೇರೆಯಾಗೋಣ, ಅರಳೋಣ); ವಿದಲಿತ; ಸಂದಲನ.

ದಶ್ ಕ್ರಿ. (ಕಚ್ಚು). ದಶನ (ಕಚ್ಚುವ ಸಾಧನ, ಹಲ್ಲು); ದಂಶ; ದಂಶಕ; ದಂಶಿತ; ದಂಷ್ಟ್ರಾ (ದವಡೇ ಹಲ್ಲು); ದಂಷ್ಟ್ರೀ (ಕಾಡ ಹಂದಿ).

ದಹ್ ಕ್ರಿ. (ಸುಡು). ದಗ್ಧ (ಸುಟ್ಟ); ದಹನ (ಬೆಂಕಿ); ದಾಹ; ದಾಹಕ; ನಿರ್ದಗ್ಧ (ತೀರ ಸುಟ್ಟ); ವಿದಗ್ಧ (ಮನೋವಾಸನೆಗಳನ್ನು ಸುಟ್ಟು ಬಿಟ್ಟವ, ಜ್ಞಾನಿ, ಸಾಧು); ವೈದಗ್ಧ್ಯ (ಸಾಧುತನ, ಜಾಣತನ); ಸಂದಗ್ಧ; ಸಂದಾಹ (ತಾಪ, ಜ್ವರ).

**ದಾ** ಕ್ರಿ. (ಕೊಡು) ದತ್ತ (ಕೊಟ್ಟ); ದಾತಾ; ದಾನ; ದಾನೀಯ; ದಾಪನ (ಕೊಡಿಸೋಣ); ದಾಯ (ಪಾಲು); ಆದಾನ (ತಕ್ಕೊಳ್ಳೋಣ); ಉಪಾದಾನ; ಪ್ರದಾನ; ಅಗ್ರದಾನ (ಅಗ್ರ=ಮೇಲಾದ); ಗೋದಾನ (ಗೋ=ಆಕಳು); ಭೂದಾನ (ಭೂ=ನೆಲ).

**ದಾಸ್** ಕ್ರಿ. (ಆಳಾಗು). ದಾಸ; ದಾಸೀ; ದಾಸತ್ವ; ದಾಸ್ಯ.

**ದಿಶ್** ಕ್ರಿ. (ಹೇಳು, ತೋರಿಸು) ದಿಕ್; ದಿಶಾ; ದೇಶ (ನಾಡು); ದೇಶಿಕ; ದೇಶೀಯ; ಉಪದೇಶ (ಹೇಳುವಿಕೆ); ಉಪದೇಷ್ಟಾ (ಗುರು); ನಿದೇಶ (ಅಪ್ಪಣೆ); ನಿರ್ದೇಶ; ವಿದೇಶ (ಪರದೇಶ); ಸಂದೇಶ (ಸುದ್ದಿ).

**ದೀ** ಕ್ರಿ. (ತಗ್ಗು, ಕ್ಷೀಣವಾಗು). ದೀನ (ತಗ್ಗಿದವ, ಬಡವ); ದೀನತಾ; ದೈನ್ಯ (ಬಡತನ); ದೈನ್ಯಭಾವ.

**ದೀಕ್ಷ್** ಕ್ರಿ. (ಯಜ್ಞಮಾಡು). ದೀಕ್ಷಾ (ಯಜ್ಞಕ್ಕಾಗಿ ತಕ್ಕ ವ್ರತ ಹಿಡಿಯೋಣ); ದೀಕ್ಷಿತ.

**ದುಷ್** ಕ್ರಿ. (ಕೆಡಕು ಮಾಡು). ದುಷ್ಟ; ದೋಷ; ದೋಷೀ (ಕೆಡಕು ಮಾಡಿದವ); ನಿರ್ದೋಷ; ಸದೋಷ; ತ್ರಿದೋಷ (ಕಫ ವಾತ ಪಿತ್ತ ಎಂಬ ಮೂರು ಶರೀರದೊಳಗಿನ ದೋಷಗಳು).

**ದೂಷ್** ಕ್ರಿ. (ಹೆಸರಿಡು, ಕುಂದಿಡು) ದೂಷಕ; ದೂಷಣ; ದೂಷಿತ; ದೂಷ್ಯ; ವಿದೂಷಕ (ನಾಟಕಗಳಲ್ಲಿ ಎಲ್ಲರಿಗೂ ಕುಂದಿಡುವ ಪಾತ್ರ).

**ದೃ** ಕ್ರಿ. (ಆದರ ಮಾಡು). ಆದರ; ಆದೃತ; ಅನಾದರ; ಅನಾದೃತ; ಸಾದರ (ಆದರದಿಂದ, ಮಾನ ಮಾಡಿ).

**ದೃಭ್** ಕ್ರಿ. (ಹೆಣೆ). ದರ್ಭ; ಸಂದರ್ಭ (ಹೆಣಿಕೆ, ರಚನೆ, ಇದರ ಮೇಲಿಂದ ಯೋಗ್ಯ ಪ್ರಸಂಗ).

ದೃಶ್ ಕ್ರಿ. (ನೋಡು). ದರ್ಶ; ದರ್ಶಕ; ದರ್ಶನ; ದರ್ಶಿತ; ದೃಷ್ಟ; ದೃಷ್ಟಿ (ಕಣ್ಣು); ದ್ರಷ್ಟವ್ಯ (ನೋಡ ತಕ್ಕ); ದ್ರಷ್ಟಾ (ನೋಡುವವ); ಅದೃಷ್ಟ (ಯಾರು ನೋಡದಂಥಾದ್ದು, ದೈವ); ಆದರ್ಶ (ಕನ್ನಡಿ); ನಿದರ್ಶನ (ಪ್ರತೀತಿ); ಪ್ರದರ್ಶನ; ಸಂದರ್ಶನ (ದರ್ಶನ).

ದೃ ಕ್ರಿ. (ಒಡೆ). ದಾರಣ; ದಾರು (ಕಟ್ಟಿಗೆ); ವಿದಾರಣ; ವಿದಾರಿತ.

ದೈ ಕ್ರಿ. (ಕಾಪಾಡು). ದಯಾ (ಕಾಪಾಡ ಬೇಕೆಂಬ ಇಚ್ಛೆ); ದಯಾಲು; ದಯಿತ (ಕಾಪಾಡುವವ, ಗಂಡ); ಅದಯ; ನಿರ್ದಯ; ಸದಯ.

ದ್ಯುತ್ ಕ್ರಿ. (ಹೊಳೆ). ದ್ಯುತಿ (ಹೊಳಪು); ದ್ಯೋತ (ಬೆಳಕು); ದ್ಯೋತಕ (ಬೆಳಕು ಮಾಡುವ, ಸ್ಪಷ್ಟ ತೋರಿಸುವ); ಖದ್ಯೋತ (ಖ=ಪ್ರಕಾಶ; ಆಕಾಶದಲ್ಲಿ ಹೊಳೆಯುವ, ಸೂರ್ಯ).

ದ್ರುಹ್ ಕ್ರಿ. (ಹಗೆತನ ಮಾಡು). ದ್ರೋಹ (ಹಗೆತನ, ವೈರ); ದ್ರೋಹಕ; ದ್ರೋಹೀ; ಗುರುದ್ರೋಹ (ಗುರು=ಹಿರಿಯ); ದೇವದ್ರೋಹ; ಬ್ರಹ್ಮದ್ರೋಹ; ಮಿತ್ರದ್ರೋಹ; ರಾಜದ್ರೋಹ.

ದ್ರೈ ಕ್ರಿ. (ಮಲಗು). ನಿದ್ರಾ [ನಿದ್ದೆ]; ನಿದ್ರಿತ; ನಿದ್ರಾಲು; ಉನ್ನಿದ್ರ (ನಿದ್ದೆಯಿಲ್ಲದ, ಎಚ್ಚರವುಳ್ಳ, ಅರಳಿದ); ವಿನಿದ್ರ (ಎಚ್ಚತ್ತ, ಅರಳಿದ).

ದ್ವಿ ವಿ. (ಎರಡು). ದ್ವಿತಯ; ದ್ವಿತೀಯ (ಎರಡನೆಯ); ದ್ವಿತೀಯಾ [ಬಿದಿಗೆ]; ದ್ವಿಧಾ (ಎರಡರಲ್ಲಿ); ದ್ವೈತ (ಜೀವೇಶ್ವರ ಭೇದ); ಅದ್ವೈತ (ಜೀವೇಶ್ವರರ ಅಭೇದ); ದ್ವಿಗುಣ (ಗುಣ=ಪಾಲು; ಎರಡು ಪಾಲು); ದ್ವಿಜ (ಎರಡು ಸಾರಿ ಹುಟ್ಟಿದವ, ಬ್ರಾಹ್ಮಣ); ದ್ವಿಪಾದ (ಪಾದ=ಕಾಲು; ಮನುಷ್ಯ); ದ್ವಿವಿಧ (ವಿಧ=ತರ; ಎರಡು ತರ).

ದ್ವಿಷ್ ಕ್ರಿ. (ಹಗೆತನ ಮಾಡು). ದ್ವೇಷ; ದ್ವೇಷೀ; ದ್ವೇಷ್ಟಾ; ದ್ವೇಷ್ಯ; ವಿದ್ವೇಷ (ಹೆಚ್ಚಾದ ಹಗೆತನ).

ಧನ್ ಕ್ರಿ. (ಕಾಳು ಬೆಳಸು). ಧನ; ಧನಿಕ; ಧಾನ್ಯ (ಕಾಳು); ನಿರ್ಧನ; ಸಧನ.

ಧಾ ಕ್ರಿ. (ಧಾರಣ ಮಾಡು, ಪೋಷಣ ಮಾಡು). ಧಾತಾ; ಧಾತು (ಮೂಲ, ಬೀಜ); ಧಾತ್ರೀ (ಪೋಷಣ ಮಾಡುವ್ಯಾಕೆ, ಉಪಮಾತೆ); ಅಭಿಧಾನ (ಧರಿಸಿದ ಹೆಸರು); ಅವಧಾನ; ಆಧಾನ (ಧರಿಸೋಣ); ಉಪಧಾನ (ತಲೆಗಂಬು); ನಿಧಾನ; ಪರಿಧಾನ (ಧಾರಣ ಮಾಡ ತಕ್ಕ ವಸ್ತ್ರ); ಪ್ರಧಾನ; ವಿಧಾನ; ವಿಧಿ; ಸಂಧಾನ; ಸಂಧಿ; ಸಮಾಧಾನ (ಸಂತೋಷ).

ಧೂಪ್ ಕ್ರಿ. (ಸುಡು). ಧೂಪ (ದೇವತಾದಿಗಳ ಮುಂದೆ ಸುಡ ತಕ್ಕ ಸುಗಂಧ ಪದಾರ್ಥ); ಧೂಪನ; ಧೂಪಿತ; ಧೂಪಾರತಿ (ದೇವರ ಮುಂದೆ ಧೂಪವ ತಿರವ್ಯೋಣ).

ಧೃ ಕ್ರಿ. (ಧರಿಸು, ಹಿಡಿ). ಧರಣ; ಧರಣೀ (ಪೊಡಿವೆ); ಧರಾ; ಧರಿತ್ರೀ; ಧರ್ಮ (ಯೊವತ್ತು ಜನರನ್ನು ಕೆಟ್ಟ ಕೆಲಸದಿಂದ ತಿರಗಿಸಿ ಒಳ್ಳೆತಕ್ಕೆ ಉದ್ಯುಕ್ತ ಮಾಡುವ ಕಟ್ಟಳೆಗಳ ಸಂಗ್ರಹ); ಧರ್ಮಿಷ್ಟ; ಧರ್ಮಿರ್ಷ್ಠ; ಧಾರಣ; ಧಾರಣಾ (ಹೇಳಿದ್ದೆಲ್ಲ ನೆನಪಿಡ ತಕ್ಕ ಶಕ್ತಿ); ಧಾರ್ಮಿಕ; ಧೃತಿ (ಧೈರ್ಯ); ಆಧಾರ; ಉದ್ಧಾರ (ಮೇಲು ಎತ್ತೋಣ, ದಾಟಿಸೋಣ); ನಿರ್ಧಾರ; ಸಂಧಾರಣ; ಸುಧಾರಣಾ (ತಿದ್ದುವಿಕೆ).

ಧ್ಮಾ ಕ್ರಿ. (ಊದು). ಧಮನ (ತಿದಿ); ಧಮನೀ (ಊದಗೊಳವೆ; ರಕ್ತ ಹರಿಯುವ ನರ); ಆಧ್ಮಾತ (ಊದಿದ, ಗರ್ವದಿಂದ ಉಬ್ಬಿದ).

ಧ್ಯೈ ಕ್ರಿ. (ಚಿಂತನೆ ಮಾಡು). ಧೀ (ಚಿಂತನೆ ಮಾಡುವ ಶಕ್ತಿ, ಬುದ್ಧಿ); ಧ್ಯಾತ; ಧ್ಯಾನ; ಧ್ಯೇಯ; ಅನುಧ್ಯಾನ; ನಿದಿಧ್ಯಾಸ (ಏಕಾಗ್ರವಾಗಿ ಚಿಂತನೆ ಮಾಡೋಣ).

ಧ್ವನ್ ಕ್ರಿ. (ಒದರು). ಧ್ವನಿ; ಧ್ವನಿತ; ಧ್ವಾನ; ಪ್ರತಿಧ್ವನಿ (ಗವಿ ಗುಡಿ ಮುಂತಾದ ಕೆಲವು ನಿರ್ವಾತ ಪ್ರದೇಶಗಳಲ್ಲಿ ಉಚ್ಚರಿಸಿದ ಧ್ವನಿಗೆ ಸರಿಯಾಗಿ ಹುಟ್ಟುವ ಧ್ವನಿ, ಪಡಸಾದ).

ಧ್ವಂಸ್ ಕ್ರಿ. (ಹಾಳು ಮಾಡು). ಧ್ವಂಸ; ಧ್ವಂಸಕ; ಉದ್ಧ್ವಸ್ತ (ತೀರ ಹಾಳುಗೆಡಹಿದ); ಪ್ರಧ್ವಂಸ; ವಿಧ್ವಂಸ.

ನಟ್ ಕ್ರಿ. (ಕುಣಿ). ನಟ; ನಟನ; ನಟೀ; ನಾಟಕ; ನಾಟ್ಯ.

ನದ್ ಕ್ರಿ. (ಅವ್ಯಕ್ತ ಧ್ವನಿ ಮಾಡು). ನದೀ (ಅವ್ಯಕ್ತ ಧ್ವನಿ ಗೈಯುತ್ತಾ ಹರಿಯುವ ನೀರ ಪ್ರವಾಹವು); ನಾದ; ನಾದಿತ; ನಿನಾದ (ದೊಡ್ಡ ಧ್ವನಿ); ಪ್ರಣಾದ.

ನಂದ್ ಕ್ರಿ. (ಬೆಳೆ, ಸಂತೋಷ ಕೊಡು). ನಂದನ (ಬೆಳೆಯುವವ, ಮಗ); ನಾಂದಿ (ನಾಟಕಗಳಲ್ಲಿ ವಿಘ್ನ ಬರ ಬಾರದೆಂಬದಾಗಿ ಮಾಡುವ ದೇವತಾಸ್ತುತಿ); ಆನಂದ; ಆನಂದಿತ; ಆನಂದೀ.

ನಮ್ ಕ್ರಿ. (ಬಾಗು, ಎರಗು). ನತ (ಬಾಗಿದ, ಎರಗಿದ); ನತಿ; ನಮನ; ನಮಸ್ಕಾರ; ನಮ್ಯ; ನಮ್ರ (ಎರಗಿದ); ನಾಮ (ನಮನ); ಅವನತ (ಬಾಗಿದ); ಅವನತಿ; ಉನ್ನತ (ಏರಿದ); ಉನ್ನತಿ (ಏರುವಿಕೆ); ಪ್ರಣತ (ಎರಗಿದ); ಪ್ರಣತಿ; ಪ್ರಣಾಮ; ವಿನತ; ವಿನತಿ.

ನಲ್ ಕ್ರಿ. (ಕಟ್ಟು). ನಲ; ನಲಿಕಾ [ಲಳಿಗೆ]; ಪ್ರಣಾಲೀ [ಹರಿನಳಿಗೆ].

ನವನ್ ನಾ. (ಒಂಭತ್ತು). ನವಮ; ನವಮೀ; ನವರಸ (ಶೃಂಗಾರ ವೀರ ಕರುಣಾ ಅದ್ಭುತ ಮುಂತಾದವುಗಳು); ನವರಾತ್ರ (ರಾತ್ರಿ=ಇರುಳು; ಒಂಭತ್ತು ರಾತ್ರಿಗಳ ಹಬ್ಬ).

ನಶ್ ಕ್ರಿ. (ಹಾಳಾಗು). ನಶ್ವರ; (ಹಾಳಾಗುವದು, ಕ್ಷಣಿಕ); ನಷ್ಟ; ನಾಶ; ನಾಶಕ; ನಾಶನ; ವಿನಾಶ; ವಿನಾಶೀ; ಅವಿನಾಶೀ (ಹಾಳಾಗದ, ಸ್ಥಿರವಾಗಿರುವ).

ನಾಥ್ ಕ್ರಿ. (ಸಮರ್ಥನಾಗು). ನಾಥ (ಯಜಮಾನ, ಒಡೆಯ); ಅನಾಥ (ಯಜಮಾನನಿಲ್ಲದೆ ಇದ್ದವ, ಪರದೇಶಿ); ಸನಾಥ; ಜಗನ್ನಾಥ (ಜಗತ್=ಲೋಕ; ಲೋಕದ ಒಡೆಯ); ಲೋಕನಾಥ; ವಿಶ್ವನಾಥ.

ನಿಂದ್ ಕ್ರಿ. (ನಿಂದಿಸು, ಜರಿ). ನಿಂದಕ; ನಿಂದಾ; ನಿಂದಿತ; ನಿಂದ್ಯ; ಅನಿಂದ್ಯ; ವಿನಿಂದ್ಯ.

**ನೀ** ಕ್ರಿ. (ಒಯ್ಯು). ನಯ; ನಯನ (ಒಯ್ಯೋಣ, ಇದರ ಮೇಲಿಂದಲೆ ನಮ್ಮ ಚಿತ್ತವನ್ನು ಪದಾರ್ಥಗಳ ಮೇಲೆ ಒಯ್ಯುವ ದ್ವಾರ, ಕಣ್ಣು); ನಾಯಕ (ಒಯ್ಯುವವ, ಪ್ರಮುಖ); ನೀತ; ನೀತಿ (ಒಳ್ಳೆ ಪದ ಕಡೆ ಒಯ್ಯೋಣ); ನೇತಾ (ದಾರಿಯಿಂದ ಒಯ್ಯುವವ, ಗುರು); ನೇತ್ರ (ಕಣ್ಣು); ಅನುನಯ (ಲೋಭ ಸಂಪಾದಿಸೋಣ); ಉಪನಯನ (ವೇದಾಧಿಕಾರಕ್ಕೆ ಸಮೀಪ ಒಯ್ಯೋಣ, ಮುಂಜೀ ಮಾಡೋಣ); ನಿರ್ಣಯ (ಕಡೆಗೆ ಒಯ್ಯೋಣ, ನಿಶ್ಚಯಿಸೋಣ); ಪರಿಣಯ (ಮದುವೆ); ಪ್ರಣಯ (ಪ್ರೀತಿ); ವಿನಯ (ಚಲೋ ಶಿಕ್ಷಣ).

**ನುದ್** ಕ್ರಿ. (ಪ್ರೇರಿಸು). ನೋದ; ನೋದಿತ; ವಿನೋದ; ವಿನೋದನ; ವಿನೋದೀ.

**ನೃತ್** ಕ್ರಿ. (ಕುಣಿ). ನರ್ತಕ; ನರ್ತನ (ಕುಣಿತ); ನೃತ್ಯ.

**ಪಚ್** ಕ್ರಿ. (ಸ್ಪಷ್ಟ ಮಾಡು, ವಿಸ್ತಾರ ಮಾಡು). ಪ್ರಪಂಚ (ವಿಸ್ತಾರ ಸಂಸಾರ); ಪ್ರಪಂಚೀ (ಸಂಸಾರಿಕ); ಪ್ರಾಪಂಚಿಕ; ಪಂಚಪಾತ್ರ (ಅಗಲ ಬಾಯಿಯ ಪಾತ್ರೆ); ಪಂಚಾಸ್ಯ (ಆಸ್ಯ=ಬಾಯಿ; ಅಗಲ ಬಾಯಿಯ ಶ್ವಾಪದ, ಸಿಂಹ).

**ಪಚ್** ಕ್ರಿ. (ಬೆಯಿಸು, ಅಡಿಗೆ ಮಾಡು). ಪಕ್ವ (ಬೆಂದು); ಪಚನ; ಪಚಿತ; ಪಾಕ (ಅಡಿಗೆ); ಪಾಚಕ (ಅಡಿಗೆ ಮಾಡುವವ); ಪಾಚನ; ಪಾಚಿತ; ಅಪಕ್ವ (ಬೆಯದಿದ್ದ); ಪರಿಪಕ್ವ; ಪರಿಪಾಕ; ವಿಪಾಕ.

**ಪಂಚನ್** ವಿ. (ಐದು). ಪಂಚಕ; ಪಂಚಮ; ಪಂಚಮೀ (ಐದನೇ ತಿಥಿ); ಪಂಚಪ್ರಾಣ (ಪ್ರಾಣ=ಜೀವ); ಪಂಚಬಾಣ (ಬಾಣ=ಗಣೆ; ಕಾಮ); ಪಂಚಮುಖ (ಮುಖ=ಮೋರೆ; ಶಿವ); ಪಂಚಶರ (ಶರ=ಗಣೆ; ಕಾಮ).

ಪಠ್ ಕ್ರಿ. (ಓದು, ಕಲಿ). ಪಠನ; ಪಠಿತ; ಪಾಠ; ಪಾಠಕ (ಓದ ಕಲಿಸು ವವ); ಪರಿಪಾಠ (ಮೇಲಿಂದ ಮೇಲೆ ಓದೋಣ, ಆವೃತ್ತಿ ಮಾ ಡೋಣ; ಇದರ ಮೇಲಿಂದ ಯಾವಾಗುಲು ಮಾಡೋಣ, ಪ್ರಚಾರ, ವಾಡಿಕೆ).

ಪಣ್ ಕ್ರಿ. (ವ್ಯವಹಾರ ಮಾಡು). ಪಣ (ವ್ಯವಹಾರದಲ್ಲಿ ವಿನಿಮಯಕ್ಕೆ ಸಾಧನವಾದ ದ್ರವ್ಯ), [ಹಣ]; ಪಣ್ಯ (ಹಣಕ್ಕೆ ಶಿಕ್ಕುವಂಥ); ಆ ಪಣ (ವ್ಯವಹಾರ ಸಾಗುವ ಸ್ಥಳ, ಸಂತೆ).

ಪತ್ ಕ್ರಿ. (ಬೀಳು). ಪತನ (ಬೀಳೋಣ); ಪತಿತ (ಕುಲದಿಂದ ಬಿದ್ದ ವ, ಭ್ರಷ್ಟ); ಪಾತಕ; ಪಾತನ; ಪಾತಿತ; ಅತಿಪಾತ (ಮಿಾರಿ ಬೀಳೋಣ, ಮಿಾರೋಣ); ನಿಪಾತ (ನಾಶ); ಪ್ರಪಾತ (ಬೆಟ್ಟದ ಮೋಕ); ಸಂಪಾತ.

ಪಥ್ ಕ್ರಿ. (ನಡೆ, ಹೋಗು). ಪಥ (ಹಾದಿ); ಪಥಿಕ (ಹಾದಿಕಾರ); ಪಂಥಾ (ಹಾದಿ); ಪಾಥೇಯ (ಹಾದಿಗಾಗಿ ತಕ್ಕೊಂಡ ಬುತ್ತಿ); ಪಾಂಥ; ಪಾಂಥಸ್ಥ; ಅಪಥ (ಕೆಟ್ಟ ದಾರಿ); ಕುಪಥ; ಸುಪಥ.

ಪದ್ ಕ್ರಿ. (ಹೋಗು). ಪದ (ಸ್ಥಳ); ಪದವೀ (ಹಾದಿ); ಪದಾತಿ (ಕಾಲಾಳು); ಪದ್ಯಾ (ಹಾದಿ); ಪಾದ (ಕಾಲು); ಪಾದುಕಾ [ಹಾ ವುಗೆ]; ಆಪತ್; ಆಪತ್ತಿ; ಉತ್ಪತ್ತಿ (ಹುಟ್ಟುವಿಕೆ); ಉತ್ಪನ್ನ; ನಿ ಷ್ಪತ್ತಿ; ನಿಷ್ಪನ್ನ; ವಿಪತ್ತಿ; ವಿಪನ್ನ; ಸಂಪತ್ತಿ; ಸಂಪನ್ನ; ಸಂಪಾ ದಕ; ಸಂಪಾದನ.

ಪಶ್ ಕ್ರಿ. (ಕಟ್ಟು). ಪಶು; ಪಾಶ (ಹಗ್ಗ); ಪಾಶೀ (ಹಗ್ಗದ ಕೈದಿನ ವ, ವರುಣ).

ಪಾ ಕ್ರಿ. (ಕುಡಿ). ಪಾತ್ರ (ಕುಡಿಯುವ ಸಾಧನ, ಭಾಂಡಿ); ಪಾನ; ಪಾ ನೀಯ; ಪೇಯ; ಅನುಪಾನ (ಔಷಧದ ಕೂಡ ಕುಡಿಯ ತಕ್ಕ ಪ ದಾರ್ಥ); ಪ್ರಪಾ (ಅರವಟ್ಟಿಗೆ)

**ಪಾಲ್** ಕ್ರಿ. (ಕಾಪಾಡು). ಪಾಲಕ; ಪಾಲನ; ಪಾಲಿತ; ಪರಿಪಾಲನ; ಪ್ರತಿಪಾಲನ; ಸಂಪಾಲನ; ಗೋಪಾಲ (ಗೋ=ಆಕಳು; ಗೋವಳ); ಭೂಪಾಲ (ಭೂ=ಪೊಡವಿ; ಅರಸನು).

**ಪಿಡ್** ಕ್ರಿ. (ಕೂಡಿಸು). ಪಿಂಡ; ಪಿಂಡಕ; ಪಿಂಡೀ (ಶಿವನ ಲಿಂಗ); ಸಪಿಂಡ (ಒಂದು ಪಿಂಡದವರು, ಬಳಗದವರು); ಸಪಿಂಡೀ; ಸಾಪಿಂಡ್ಯ.

**ಪಿಷ್** ಕ್ರಿ. (ಕುಟ್ಟು). ಪಿಷ್ಟ [ಹಿಟ್ಟು]; ಪೇಷಕ; ಪೇಷಣ; ಪೇಷಿತ; ಪೇಷ್ಯ.

**ಪೀಡ್** ಕ್ರಿ. (ಪೀಡಿಸು, ಹಿಡಿ). ಪೀಡಕ; ಪೀಡನ; ಪೀಡಾ; ಪೀಡಿತ; ಪಾಣಿಪೀಡನ (ಪಾಣಿ=ಕೈ; ಕೈ ಹಿಡಿಯೋಣ, ಮದುವೆ).

**ಪುಷ್** ಕ್ರಿ. (ಸಾಕು). ಪುಷ್ಟ (ಸಾಕಿದ; ಜೋಕೆ ಮಾಡಿದರಿಂದ ಮೈಕೈ ತುಂಬಿದ); ಪುಷ್ಟಿ; ಪೋಷಕ; ಪೋಷಣ; ಪೋಷಿತ; ಪೋಷ್ಯ; ಪರಪುಷ್ಟ (ಎರಡನೆಯವರಿಂದ ಜೋಕೆಯಾದದ್ದು, ಕೋಕಿಲೆ); ಬಲಿಪುಷ್ಟ (ಬಲಿ ತಿಂದು ಬದುಕುವದು, ಕಾಗೆ); ವೃಥಾಪುಷ್ಟ (ವೃಥಾ=ಸುಮ್ಮನೆ, ವಿನಾಕಾರಣ).

**ಪೂ** ಕ್ರಿ. (ಶುದ್ಧ-, ಪವಿತ್ರ ಮಾಡು). ಪವನ (ಪವಿತ್ರ ಮಾಡುವವ, ವಾಯು); ಪವಮಾನ; ಪವಿತ್ರ (ದೇಹಶುದ್ಧಿಗಾಗಿ ಬೆರಳಲ್ಲಿ ಹಾಕುವ ದರ್ಭದ ಉಂಗುರ); ಪಾವನ; ಪೂತ; ಅಪವಿತ್ರ; ಸುಪವಿತ್ರ.

**ಪೂಜ್** ಕ್ರಿ. (ಮಾನ ಮಾಡು). ಪೂಜಕ; ಪೂಜನ; ಪೂಜಾ; ಪೂಜಿತ; ಪೂಜ್ಯ; ಅಪೂಜ್ಯ; ಸಂಪೂಜ್ಯ; ದೇವಪೂಜನ; ದೇವಪೂಜಾ; ಮಹಾಪೂಜಾ.

**ಪೃ** ಕ್ರಿ. (ತುಂಬು). ಪರ್ವ [ಹಬ್ಬ, ಹುಣ್ಣಿವೆ]; ಪರ್ವಣಿ; ಪರ್ವತ (ಬೆಟ್ಟ); ಪಾರ್ವಣ (ಹಬ್ಬದ ಸಂಬಂಧಿಯಾದ).

ಪೃಚ್ ಕ್ರಿ. (ಮುಟ್ಟು). ಸಂಪರ್ಕ (ಮುಟ್ಟೋಣ); ಸಂಪೃಕ್ತ (ಮುಟ್ಟಿದ).

ಪೄ ಕ್ರಿ. (ತುಂಬು). ಪೂರ; ಪೂರಣ [ಹೂರಣ]; ಪೂರ್ಣ; ಪೂರ್ಣಿಮಾ (ಚಂದ್ರನು ಪೂರ್ಣನಾಗಿರುವ ದಿನ); ಪೂರ್ತಿ (ಸಾಕಾಗುವಷ್ಟು); ಅಪೂರ್ಣ; ಸಂಪೂರ್ಣ.

ಪ್ರಚ್ಛ್ ಕ್ರಿ. (ಕೇಳು). ಪೃಚ್ಛಕ (ಕೇಳುವವ); ಪೃಚ್ಛಾ (ಕೇಳೋಣ); ಪೃಷ್ಟ (ಕೇಳಿದ); ಪ್ರಶ್ನ.

ಪ್ರಥ್ ಕ್ರಿ. (ಹಬ್ಬು). ಪೃಥಿವೀ; ಪೃಥ್ವೀ; ಪೃಥುಕ (ಕುಟ್ಟಿ ಹಬ್ಬಿದ ಅಕ್ಕಿ, ಅವಲಕ್ಕಿ); ಪ್ರಥಮ (ಹಬ್ಬಿದ, ಮೇಲಾದ; ಇದರ ಮೇಲಿಂದ ಮೊದಲನೆಯ); ಪ್ರಥಾ (ಹೆಸರಿನ ಹಬ್ಬುವಿಕೆ, ಕೀರ್ತಿ); ಪ್ರಥಿತ.

ಪ್ರೀ ಕ್ರಿ. (ಪ್ರೀತಿ ಮಾಡು). ಪ್ರಿಯ; ಪ್ರಿಯಾ; ಪ್ರೀತಿ; ಪ್ರೇಮ.

ಫಲ್ ಕ್ರಿ. (ಹುಟ್ಟು, ಪರಿಣಾಮಗೊಳ್ಳು). ಫಲ; ಫಲಿತ; ನಿಷ್ಫಲ; ವಿಫಲ (ಫಲವಿಲ್ಲದ, ವ್ಯರ್ಥ); ಸಫಲ (ಪರಿಣಾಮಗೊಂಡ, ಪೂರ್ಣವಾದ); ಫಲಾಹಾರ (ಆಹಾರ=ತಿನಸು; ಹಣ್ಣು ತಿನ್ನೋಣ), [ಫಳಾರ].

ಬಂಧ್ ಕ್ರಿ. (ಕಟ್ಟು). ಬದ್ಧ; ಬದ್ಧಕ; ಬಂಧ; ಬಂಧನ; ಬಂಧು; ಬಾಂಧವ; ಆಬದ್ಧ [ಅಪದ್ಧ]; ಅನುಬಂಧ; ಅನುಬಂಧಿ; ನಿಬಂಧ; ನಿರ್ಬಂಧ (ಕಟ್ಟಳೆ); ಪ್ರಬಂಧ (ಶಬ್ದಗಳ ಕಟ್ಟುವಿಕೆ, ಗ್ರಂಥರಚನೆ); ಪ್ರತಿಬಂಧ (ತಡೆ); ಸಂಬಂಧ (ಆಪ್ತತನ); ಸಂಬಂಧೀ.

ಬಲ್ ಕ್ರಿ. (ಕಸುವಾಗು). ಬಲ; ಬಲೀ; ಬಲಿಷ್ಠ; ಅಬಲಾ (ಬಲವಿಲ್ಲದವಳು, ಹೆಂಗಸು); ದುರ್ಬಲ; ನಿರ್ಬಲ; ಪ್ರಬಲ; ಸಬಲ; ಬುದ್ಧಿಬಲ (ತಿಳಿವಳಿಕೆಯ ಸಾಮರ್ಥ್ಯ; ಅದರ ಮೇಲಿಂದಲೆ, ಆ ಸಾಮರ್ಥ್ಯದಿಂದ ಆಡ ತಕ್ಕ ಒಂದು ಆಟ, ಚದರಂಗ)

**ಬಾಧ್** ಕ್ರಿ. (ಅಡ್ಡ ಬರು, ಪೀಡಿಸು). ಬಾಧ; ಬಾಧಕ; ಬಾಧನ; ಬಾಧಾ (ಪಿಶಾಚಾದಿಗಳ ಪೀಡೆ); ಬಾಧಿತ; ಅಬಾಧ (ಯಾವದೂ ಅಡ್ಡ ಬಾರದೆ, ಒಂದೇ ಸರಿಯಾಗಿ); ನಿರ್ಬಾಧ; ಸಂಬಾಧ (ಹಲವರು ಅಡ್ಡ ಬರುವ, ಅಂದರೇನು: ಒತ್ತಟ್ಟಾಗುವ ಸ್ಥಳ, ದಟ್ಟಣೆ).

**ಬೀಜ್** ಕ್ರಿ. (ಹುಟ್ಟು). ಬೀಜ; ನಿರ್ಬೀಜ (ಬೀಜವಿಲ್ಲದ); ಸಬೀಜ.

**ಬುಧ್** ಕ್ರಿ. (ತಿಳಿ). ಬುಧ; ಬುದ್ಧ (ತಿಳಿದವ, ಜ್ಞಾನಿ); ಬುದ್ಧಿ (ತಿಳವಳಿಕೆ); ಬೋಧ (ತಿಳವಳಿಕೇ ಹುಟ್ಟಿಸ ತಕ್ಕ ಮಾತು); ಬೋಧಕ; ಬೋಧನ; ಬೋಧ್ಯ; ದುರ್ಬುದ್ಧಿ; ಪ್ರಬುದ್ಧ (ತಿಳವಳಿಕೆ ಹುಟ್ಟಿದವ, ದೊಡ್ಡವ); ಸಂಬೋಧನ (ಏನಾದರು ತಿಳಿಸುವದಕ್ಕಾಗಿ ಕರೆಯೋಣ).

**ಬೃಹ್** ಕ್ರಿ. (ಬೆಳೆ, ಹೆಚ್ಚಾಗು). ಬರ್ಹ (ಗರಿ); ಬ್ರಹ್ಮ (ಬೆಳೆಯುವವ, ಹೆಚ್ಚಾಗುವವ, ವ್ಯಾಪಿಸುವವ, ಅರ್ಥಾತ್ ಈಶ್ವರ); ಬ್ರಾಹ್ಮ; ಬ್ರಾಹ್ಮಣ (ಬ್ರಹ್ಮಸಂಬಂಧಿ ಜ್ಞಾನವುಳ್ಳವ); ಬ್ರಾಹ್ಮಣ್ಯ; ಬ್ರಹ್ಮದ್ರೋಹ (ದ್ರೋಹ=ಹಗೆತನ); ಬ್ರಹ್ಮದ್ವೇಷ; ಬ್ರಹ್ಮಹತ್ಯಾ (ಹತ್ಯಾ=ಕೊಲ್ಲೋಣ; ಬ್ರಾಹ್ಮಣನ ಕೊಲ್ಲೋಣ).

**ಭಕ್ಷ್** ಕ್ರಿ. (ತಿನ್ನು). ಭಕ್ಷಕ; ಭಕ್ಷಣ; ಭಕ್ಷಣೀಯ (ತಿನ್ನ ತಕ್ಕ); ಭಕ್ಷಿತ; ಭಕ್ಷ್ಯ; ಅಭಕ್ಷ್ಯ (ತಿನ್ನ ಕೂಡದ, ಅಶುದ್ಧ).

**ಭಜ್** ಕ್ರಿ. (ಪಾಲು ಮಾಡು). ಭಾಗ (ಪಾಲು); ಭಾಜಕ; ಭಾಜ್ಯ; ಅವಿಭಕ್ತ (ಪಾಲಾಗದ); ಅವಿಭಾಜ್ಯ; ವಿಭಕ್ತ (ಪಾಲಾದ)

**ಭಜ್** ಕ್ರಿ. (ಸೇವಿಸು). ಭಕ್ತ; ಭಕ್ತಿ; ಭಜಕ; ಭಜನ; ಭಜನೀಯ (ಸೇವಿಸ ತಕ್ಕ).

**ಭಂಜ್** ಕ್ರಿ. (ಮುರಿ). ಭಂಗ; ಭಂಗುರ (ಮುರಿಯ ತಕ್ಕ); ಭಗ್ನ (ಮುರಿದ); ಭಂಜಕ; ಭಂಜನ; ಪ್ರಭಂಜನ (ಗಿಡ ಮುಂತಾದವುಗಳನ್ನು ಕಿತ್ತು ಕೆಡಹುವಂಥ ಬಿರುಗಾಳಿ).

ಭಣ್ ಕ್ರಿ. (ಅನ್ನು). ಭಣಿತ; ಭಣಿತಿ; ಭಾಣ (ಒಂದು ತರದ ಗದ್ಯ ಪದ್ಯಾತ್ಮಕ ಪ್ರಬಂಧ).

ಭರ್ತ್ಸ್ ಕ್ರಿ. (ಜರಿ, ನಿಂದಿಸು). ಭರ್ತ್ಸನ; ಭರ್ತ್ಸನಾ; ಭರ್ತ್ಸಿತ; ನಿರ್ಭರ್ತ್ಸನಾ (ಜರಿಯೋಣ, ನಿಂದೆ, ಧಿಃಕಾರ); ನಿರ್ಭರ್ತ್ಸಿತ.

ಭಾ ಕ್ರಿ. (ಹೊಳೆ). ಭಾ (ಕಾಂತಿ, ಹೊಳಪು); ಭಾನು (ಹೊಳಪಿನವ, ಸೂರ್ಯ); ಪ್ರಭಾ; ಪ್ರಭಾತ; ವಿಭಾತ (ಬೆಳಗ ಮುಂಜಾವು).

ಭಾಸ್ ಕ್ರಿ. (ಹೊಳೆ). ಭಾಸ (ಹೊಳೆಯೋಣ, ಅದೋ ಇದೋ ಎಂಬ ಅನಿಶ್ಚಿತ ಜ್ಞಾನ); ಭಾಸಕ; ಭಾಸನ; ಭಾಸಿತ; ಭಾಸುರ(ಹೊಳೆಯುವ); ಭಾಸ್ಕರ (ಸೂರ್ಯ); ಭಾಸ್ವರ (ಹೊಳೆಯುವ); ಆಭಾಸ; ವಿಭಾಸ.

ಭಿಕ್ಷ್ ಕ್ರಿ. (ಬೇಡು). ಭಿಕ್ಷಾ [ಭಿಕ್ಕೆ]; ಭಿಕ್ಷು (ತಿರಕೊಂಡು ತಿನ್ನುವ ಸನ್ಯಾಸಿ); ಭಿಕ್ಷುಕ; ದುರ್ಭಿಕ್ಷ; ಸುಭಿಕ್ಷ.

ಭುಜ್ ಕ್ರಿ. (ಡೊಂಕಾಗು). ಭುಜ (ತೋಳು); ಭುಜಗ (ಡೊಂಕ ಡೊಂಕಾಗಿ ಹೋಗುವ ಪ್ರಾಣಿ, ಹಾವು); ಭುಜಂಗ.

ಭೂ ಕ್ರಿ. (ಆಗು, ಇರು). ಭವ (ಹುಟ್ಟು); ಭವನ; ಭವಿತವ್ಯ (ಆಗತಕ್ಕ); ಭವಿಷ್ಯ; ಭವ್ಯ; ಭಾವ; ಭಾವನಾ; ಭಾವಿತ; ಭಾವೀ; ಭಾವುಕ; ಭೂತ (ಆದದ್ದು); ಅನುಭವ; ಅನುಭವೀ; ಪರಾಭವ (ಸೋಲಿಕೆ); ಪ್ರಭವ; ಪ್ರಭಾವ (ಮಹತ್ವ); ವಿಭವ; ವಿಭವೀ; ವಿಭಾವ; ವೈಭವ; ಸಂಭವ; ಸಂಭಾವನಾ (ಸತ್ಕಾರ); ಸಂಭಾವಿತ.

ಭೂಷ್ ಕ್ರಿ. (ಎಸೆ). ಭೂಷಣ; ಭೂಷಾ; ಭೂಷಿತ; ವಿಭೂಷಣ; ವಿಭೂಷಿತ; ಸಂಭೂಷಣ; ಸಂಭೂಷಿತ.

ಭೃ ಕ್ರಿ. (ಸಾಕು, ಹೊಟ್ಟೆಗೆ ಹಾಕು). ಭರಣ; ಭರ್ತಾ (ಹೊಟ್ಟೆಗೆ ಹಾಕುವವ, ಗಂಡ); ಭಾರ್ಯಾ (ಹೆಂಡತಿ); ಭೃತ್ಯ (ಆಳುಮಗ).

**ಭೃಜ್** ಕ್ರಿ. (ಸುಡು). ಭರ್ಜನ; ಭರ್ಜಿತ (ಬದನೇಕಾಯಿ ಮುಂತಾದ್ದು ಸುಟ್ಟು ಮಾಡಿದ ವ್ಯಂಜನ ಪದಾರ್ಥ); [ಭರಿತ].

**ಭ್ರಮ್** ಕ್ರಿ. (ತಿರಗು). ಭ್ರಮ (ತಲೆ ತಿರಗೋಣ); ಭ್ರಮಣ; ಭ್ರಮರ (ಯಾವಾಗಲು ತಿರಗುತ್ತಾ ಇರುವಂಥ ಪ್ರಾಣಿ, ಗುಂಗೀ ಹುಳ); ಭ್ರಮಿತ; ಭ್ರಮಿಷ್ಟ; ಭ್ರಾಂತ (ತಲೆ ತಿರಗಿದವ, ಹುಚ್ಚ); ಭ್ರಾಂತಿ; ಪರಿಭ್ರಮ; ವಿಭ್ರಮ; ಸಂಭ್ರಮ (ದುಃಖದಿಂದಾಗಲಿ ಹರ್ಷದಿಂದಾಗಲಿ ಉಂಟಾಗುವ ಮನಸ್ಸಿನ ಚಂಚಲತೆ); ಸಂಭ್ರಾಂತ.

**ಭ್ರಂಶ್** ಕ್ರಿ. (ಬೀಳು). ಭ್ರಷ್ಟ; ಭ್ರಂಶ; ಭ್ರಂಶನ; ಭ್ರಂಶಿತ; ಅಪಭ್ರಂಶ (ಶಬ್ದದ ಮೂಲಸ್ಥಿತಿ ಕೆಟ್ಟು ರೂಪಾಂತರವಾಗೋಣ).

**ಮಕ್ಷ್** ಕ್ರಿ. (ಕೂಡಿ ಹಾಕು). ಮಕ್ಷಿಕಾ (ನೊಣ); ಮಾಕ್ಷಿಕ (ನೊಣಗಳು ಕೂಡಿ ಹಾಕಿದ ಮಕರಂದ, ಜೇನು); ಮಧುಮಕ್ಷಿಕಾ.

**ಮಗ್** ಕ್ರಿ. (ಶೋಭಿಸು). ಮಂಗಲ; ಮಾಂಗಲ್ಯ; ಅಮಂಗಲ; ಸುಮಂಗಲ; ಮಂಗಲಮೂರ್ತಿ (ಗಣೇಶ); ಮಂಗಲಸೂತ್ರ (ಸೂತ್ರ=ದಾರ; ಮದುವೆಯಾದ ಹೆಂಗಸರು ಕೊರಳಲ್ಲಿ ಹಾಕುವ ಸೌಭಾಗ್ಯಸೂಚಕ ಆಭರಣ); ಮಂಗಲಾಚರಣ (ಆಚರಣ=ಮಾಡೋಣ; ಗ್ರಂಥಾದಿಗಳಿಗೆ ವಿಘ್ನ ಬರ ಬಾರದೆಂದು ಮಾಡುವ ದೇವತಾಪ್ರಾರ್ಥನೆ).

**ಮಜ್ಜ್** ಕ್ರಿ. (ಮುಳುಗು). ಮಗ್ನ (ಮುಳುಗಿದವ); ಮಜ್ಜನ; ಮಜ್ಜಿತ; ನಿಮಗ್ನ.

**ಮಡ್** ಕ್ರಿ. (ಶೋಭಿಸು). ಮಂಡನ (ವಸ್ತ್ರ); ಮಂಡಪ [ಮಂಟಪ]; ಮಂಡಲ (ಸಣ್ಣ ಪ್ರದೇಶ); ಮಂಡಿತ; ಮಾಂಡಲಿಕ (ಮಂಡಲವನ್ನು ಆಳುವವ).

**ಮಂತ್ರ್** ಕ್ರಿ. (ಒಳಸಂಚ ಮಾಡು, ಮಾತಾಡು). ಮಂತ್ರ (ಒಳಸಂಚು); ಮಂತ್ರೀ; ಮಾಂತ್ರಿಕ (ಪಿಶಾಚಾದಿಗಳ ಕೂಡ ಒಳಸಂಚ ಮಾಡಿ

ರೋಗಾದಿಗಳನ್ನು ದೂರ ಮಾಡ ಶಕ್ತಿಯುಳ್ಳವ); ಆಮಂತ್ರಣ [ಔತಣ]; ಅಮಂತ್ರಿತ; ನಿಮಂತ್ರಣ; ನಿಮಂತ್ರಿತ.

**ಮಥ್** ಕ್ರಿ. (ಕಡೆ). ಮಥನ; ಮಥಿತ; ಮಂಥನ; ಮಂಥಾ; ಪ್ರಮಥ (ಕಡೆಯೋಣ; ಇದರ ಮೇಲಿಂದಲೇ ಮುಂದೆ ಲಾಕ್ಷಣಿಕವಾಗಿ, ದುರ್ಬಲ ಮಾಡೋಣ, ಅಪಜಯ ಪಡಿಸೋಣ); ಪ್ರಮಥನ (ಅಪಜಯ ಪಡಿಸುವವ); ಪ್ರಮಾಥ; ಪ್ರಮಾಥಿ; ಮಂಥನದಂಡ (ದಂಡ=ಕೋಲು; ಕಡೆಗೋಲು).

**ಮದ್** ಕ್ರಿ. (ಸೊಕ್ಕೇರು, ಹರ್ಷವಾಗು). ಮತ್ತ (ಸೊಕ್ಕಿದವ); ಮದ; ಮದನ (ಕಾಮ); ಮದ್ಯ; ಮಾದಕ; ಉನ್ಮತ್ತ (ಬಹಳ ಸೊಕ್ಕಿದವ); ಉನ್ಮಾದ; ಪ್ರಮತ್ತ; ಪ್ರಮಾದ.

**ಮನ್** ಕ್ರಿ. (ವಿಚಾರ ಮಾಡು). ಮತ; ಮತಿ (ಬುದ್ಧಿ, ವಿಚಾರಶಕ್ತಿ); ಮನ; ಮನನ; ಮಾನ್ಯ; ಅನುಮತ; ಅನುಮತಿ; ಸಮ್ಮತ; ಸಮ್ಮತಿ.

**ಮಹ್** ಕ್ರಿ. (ದೊಡ್ಡದಾಗು). ಮಹತ್; ಮಹೀ (ಭೂಮಿ).

**ಮಾ** ಕ್ರಿ. (ಅಳೆ, ಎಣಿಸು). ಮಾನ (ಅಳತೆ, ಯೋಗ್ಯತೆ); ಮಿತಿ (ಅಳತೆ); ಮೇಯ (ಅಳೆಯ ತಕ್ಕ); ಅನುಮಿತಿ (ತರ್ಕ); ಅನುಮಾನ; ಉಪಮಾ (ಸಾದೃಶ್ಯ); ಉಪಮಾನ; ನಿರ್ಮಾಣ; ಪ್ರಮಾ (ನಿಜ ಅಳತೆ, ಇದರ ಮೇಲಿಂದ ಸತ್ಯ ಜ್ಞಾನ); ಪ್ರಮಾಣ (ಆಧಾರ); ಪ್ರಾಮಾಣಿಕ.

**ಮಿಲ್** ಕ್ರಿ. (ಹೊಂದು, ಸಿಗು). ಮಿಲಿತ; ಮೇಲನ; ಮೇಲಿತ; ದುರ್ಮಿಲಿ (ಸಿಕ್ಕಲಿಕ್ಕೆ ಕಷ್ಟವಾದ).

**ಮಿಶ್ರ್** ಕ್ರಿ. (ಕೂಡು, ಬೆರೆ). ಮಿಶ್ರ; ಮಿಶ್ರಣ; ಮಿಶ್ರಿತ; ಸಮ್ಮಿಶ್ರ.

**ಮುಚ್** ಕ್ರಿ. (ಬಿಡು). ಮುಕ್ತ (ಬಿಡುಗಡೆಯಾದ); ಮುಕ್ತಿ; ಮೋಕ್ಷ (ಸಂಸಾರದಿಂದ ಬಿಡುಗಡೆ); ಮೋಕ್ಷಣ; ಮೋಚನ; ಮೋಚಿತ.

**ಮುದ್** ಕ್ರಿ. (ಹರ್ಷವಾಗು). ಮುದ; ಮುದಿತ; ಮೋದ; ಮೋದಿತ; ಪ್ರಮೋದ; ಸಮ್ಮೋದ.

**ಮುರ್ಛ್** ಕ್ರಿ. (ಕವಳಿ ಬರು). ಮೂರ್ಛನ; ಮೂರ್ಛನಾ; ಮೂರ್ಛಾ; ಮೂರ್ಛಿತ.

**ಮುಹ್** ಕ್ರಿ. (ಹುಚ್ಚು ಹಿಡಿ). ಮೂಢ (ಹುಚ್ಚ); ಮೋಹ; ಮೋಹಕ; ಮೋಹನ; ಮೋಹಿತ; ಸಮ್ಮೋಹ.

**ಮೃ** ಕ್ರಿ. (ಸಾಯು). ಮರಣ; ಮಾರಕ; ಮಾರಣ; ಮೃತ; ಮೃತ್ಯು (ಸಾವು); ಅಮರ (ಸಾವಿಲ್ಲದವ, ದೇವತೆ); ಅಮೃತ (ಸಾವು ಬಾರಗೊಡದಂಥ ದಿವ್ಯ ರಸ); ಅಪಮೃತ್ಯು (ಕಾಲವಾಗದೆ ಮಧ್ಯದಲ್ಲಿ ಬಂದ ಸಾವು); ದುರ್ಮೃತ್ಯು; ಕಾಲಮೃತ್ಯು; ಅಕಾಲಮೃತ್ಯು.

**ಮೃಗ್** ಕ್ರಿ. (ಶೋಧ ಮಾಡು). ಮಾರ್ಗ (ಹಾದಿ): ಮೃಗ; ಮೃಗಯಾ (ಬೇಟೆ); ಮೃಗಯು (ಬೇಟೆಗಾರ); ಮೃಗ್ಯ.

**ಮೃದ್** ಕ್ರಿ. (ಪುಡಿ ಮಾಡು). ಮರ್ದನ; ಮರ್ದಿತ; ಮೃದು; ಉಪಮರ್ದ; ಸಮ್ಮರ್ದ.

**ಮ್ಲೈ** ಕ್ರಿ. (ಕ್ಷಯವಾಗು). ಮ್ಲಾನ; ಮ್ಲಾನತಾ; ಮ್ಲಾನಿ.

**ಯಜ್** ಕ್ರಿ. (ಯಜ್ಞ ಮಾಡು). ಯಜನ; ಯಜಮಾನ (ಯಜ್ಞ ಮಾಡುವವನು, ಯಜ್ಞದಲ್ಲಿ ಯಜಮಾನನೇ ಮುಖ್ಯನಾಗಿರುವದರಿಂದ ಯಜಮಾನ ಶಬ್ದಕ್ಕೆ ಮುಖ್ಯ, ಪ್ರಮುಖ ಎಂಬ ಅರ್ಥಗಳು ಉಂಟಾಗಿರುತ್ತವೆ); ಯಜ್ಞ; ಯಷ್ಟಾ (ಯಜ್ಞ ಮಾಡುವವ); ಯಾಗ; ಯಾಜನ; ಯಾಜೀ; ಯಾಜ್ಞಿಕ.

**ಯತ್** ಕ್ರಿ (ಯತ್ನ ಮಾಡು). ಯತ್ನ; ಪ್ರಯತ್ನ.

ಯಮ್ ಕ್ರಿ. (ಅಧೀನದಲ್ಲಿ ಇಡು). ಯತಿ (ಇಂದ್ರಿಯಗಳನ್ನು ಅಧೀನದಲ್ಲಿ ಇಟ್ಟವ); ಯಮ; ಯಾಮ (ಪ್ರಹರ); ನಿಯಮ (ಕಟ್ಟಳೆ); ನಿಯಮಿತ; ವ್ಯಾಯಾಮ (ತಿರಗೋಣ); ಸಂಯಮ (ಇಂದ್ರಿಯಗಳನ್ನು ಅಧೀನ ಇಡೋಣ); ಸಂಯಮನ; ಸಂಯಮೀ (ಯತಿ).

ಯಸ್ ಕ್ರಿ. (ಶ್ರಮ ಪಡು). ಆಯಾಸ; ಆಯಾಸೀ; ಪ್ರಯಾಸ; ಪ್ರಯಾಸೀ.

ಯಾ ಕ್ರಿ. (ಹೋಗು). ಯಾತ್ರಾ (ಹೋಗೋಣ); ಯಾತ್ರಿಕ (ಹೋಗುವವ, ಇದರ ಮೇಲಿಂದ: ಕ್ಷೇತ್ರದಿಂದ ಕ್ಷೇತ್ರಕ್ಕೆ ಹೋಗುವವ); ಯಾನ (ವಾಹನ); ಅನುಯಾಯೀ (ಹಿಂಬಾಲು ಹೋಗುವವ); ನಿರ್ಯಾಣ (ನೀಗಿ ಹೋಗೋಣ, ಸಾವು); ಪ್ರಯಾಣ; ವ್ಯೋಮಯಾನ (ವ್ಯೋಮ=ಆಕಾಶ; ವಿಮಾನ).

ಯಾಚ್ ಕ್ರಿ. (ಬೇಡು). ಯಾಚಕ (ತಿರುಕ); ಯಾಚನಾ; ಯಾಚಿತ; ಯಾಚ್ಞಾ; ಅಯಾಚಿತ (ಬೇಡದ).

ಯುಜ್ ಕ್ರಿ. (ಸಮಾಧಿ ಹಚ್ಚು) ಯೋಗ; ಯೋಗೀ; ಯೋಗ್ಯ.

ಯುಜ್ ಕ್ರಿ. (ಕೂಡಿಸು). ಯುಕ್ತ; ಯುಕ್ತಿ (ಹಂಚಿಕೆ); ಯೋಗ (ಕೂಡಿಸುವಿಕೆ); ಯೋಗ್ಯ; ಯೋಜಕ (ಕೂಡಿಸುವವ); ಯೋಜನಾ; ಉದ್ಯುಕ್ತ; ಉದ್ಯೋಗ; ಉಪಯುಕ್ತ; ಉಪಯೋಗ; ಪ್ರಯುಕ್ತ; ಪ್ರಯೋಗ; ಪ್ರಯೋಜನ; ವಿಯುಕ್ತ (ಅಗಲಿದ); ವಿಯೋಗ (ಅಗಲಿಕೆ); ಸಂಯುಕ್ತ; ಸಂಯೋಗ; ಸಂಯೋಗೀ.

ಯುಧ್ ಕ್ರಿ. (ಕಾದು). ಯುದ್ಧ (ಕಾಳಗ); ಯೋದ್ಧಾ; ಆಯುಧ (ಕೈದು).

ರಕ್ಷ್ ಕ್ರಿ. (ಕಾಪಾಡು). ರಕ್ಷಕ; ರಕ್ಷಣ; ರಕ್ಷಾ (ಕಾಪಾಡುವಿಕೆ); ರಕ್ಷಿತ; ರಕ್ಷಿತಾ (ಕಾಪಾಡುವವ); ಸಂರಕ್ಷಣ; ಸಂರಕ್ಷಿತ.

**ರಚ್** ಕ್ರಿ (ರಚಿಸು) ರಚನ; ರಚನಾ; ರಚಿತ; ವಿರಚನ; ವಿರಚಿತ; ಸಂರಚನಾ.

**ರಜ್** ಕ್ರಿ (ಸಂತೋಷ ಪಡು) ರಂಜಕ; ರಂಜನ; ರಾಗ; ರಾಗೀ; ಅನುರಾಗ (ಪ್ರೀತಿ); ವಿರಾಗ (ವಿಷಯಗಳಲ್ಲಿ ಪ್ರೀತಿ ಇಲ್ಲದೆ ಹೋಗೋಣ); ವಿರಾಗೀ; ವೈರಾಗ್ಯ.

**ರದ್** ಕ್ರಿ. (ಒಡಿ). ರದ (ಹಲ್ಲು); ರದನ.

**ರಭ್** ಕ್ರಿ. (ಆರಂಭ ಮಾಡು). ಆರಬ್ಧ; ಆರಂಭ; ಪ್ರಾರಬ್ಧ; ಪ್ರಾರಂಭ; ಸಮಾರಂಭ.

**ರಮ್** ಕ್ರಿ. (ಆಡು, ಕ್ರೀಡಾ ಮಾಡು). ರತ; ರತಿ (ಆಟ, ಕ್ರೀಡೆ); ರಮಣ; ರಮಣೀಯ; ರಮ್ಯ; ಉಪರತಿ (ವೈರಾಗ್ಯ); ವಿರತಿ; ವಿರಾಮ.

**ರಸ್** ಕ್ರಿ. (ಸವಿಯು). ರಸ; ರಸನಾ (ನಾಲಿಗೆ); ರಸಿಕ; ಅರಸ; ನಿರಸ; ವಿರಸ; ಸುರಸ; ಸ್ವಾರಸ್ಯ (ಸವಿ).

**ರಾಜ್** ಕ್ರಿ. (ಪ್ರಕಾಶಿಸು); ರಾಜನ; ರಾಜಾ; ರಾಜ್ಞೀ (ಅರಸಿ): ರಾಜ್ಯ; ಆರಾಜನ; ಆರಾಜಿತ; ನೀರಾಜನ (ಆರತೀ ಬೆಳಗೋಣ); ನೀರಾಜನಾ [ನೀರಾಂಜನ=ಆರತೀ ಬೆಳಗುವ ಪಾತ್ರೆ]; ವಿರಾಜಕ; ವಿರಾಜಿತ.

**ರಿಚ್** ಕ್ರಿ. (ತೆರವಾಗು). ರಿಕ್ತ (ತೆರವು); ರೇಚ; ರೇಚಕ (ಹೊಟ್ಟೆಯೊಳಗಿನ ಕಶ್ಮಲ ತೆಗೆದು ಹಾಕಲಿಕ್ಕೆ ಔಷಧ); ರೇಚನ; ಅತಿರಿಕ್ತ (ಮಿಾರಿ ಹೋದ); ಅತಿರೇಕ.

**ರೀ** ಕ್ರಿ. (ನಡೆ). ರೀತಿ (ನಡತೆ, ಪ್ರಚಾರ)

**ರು** ಕ್ರಿ. (ಒದರು). ರವ (ಧನಿ); ರಾವಣ (ಒದರುವವ, ಭಯಂಕರ; ಒಬ್ಬ ರಾಕ್ಷಸನ ಹೆಸರು); ಆರವ (ಒದರೋಣ); ವಿರಾವ; ಸಂರಾವ.

**ರುಜ್** ಕ್ರಿ. (ಬೇನೆಯಾಗು). ರುಗ್ಣ; ರೋಗ; ರೋಗೀ; ಆರೋಗ್ಯ (ಬೇನೆ ಇಲ್ಲದೆ ಇರುವ ಸ್ಥಿತಿ); ನಿರೋಗಿ.

**ರುದ್** ಕ್ರಿ. (ಅಳು). ರುದಿತ; ರೋದನ; ರೋದಿತ.

**ರುಧ್** ಕ್ರಿ. (ಹಿಡಿದಿಡು). ರುದ; ರೋಧ; ರೋಧಕ; ಅವರೋಧ (ಪ್ರತಿಬಂಧ, ಇದರ ಮೇಲಿಂದ ಅರಮನೆಯೊಳಗಿನ ಪ್ರತಿಬಂಧದ ಸ್ಥಳ, ರಾಣೀವಾಸ); ವಿರುದ್ಧ; ವಿರೋಧ (ವೈರ); ವಿರೋಧೀ.

**ರುಷ್** ಕ್ರಿ. (ಸಿಟ್ಟಾಗು). ರುಷ್ಟ; ರೋಷ; ರೋಷಿತ; ರೋಷೀ.

**ರುಹ್** ಕ್ರಿ. (ಬೆಳೆ). ರೂಢ (ಬೆಳೆದ, ಪ್ರಚಾರವಾದ); ರೂಢಿ (ಪ್ರಚಾರ, ರೀತಿ); ರೋಹಣ; ಆರೋಹ; ಆರೋಹಣ.

**ರೇಖ್** ಕ್ರಿ. (ಗೆರೆ ಹಾಕು). ರೇಖನ; ರೇಖಾ (ಗೆರೆ); ರೇಖಿತ; ಸುರೇಖ (ಗೆರೆ ಹಾಕಿ ಬರೆದ, ಅಡ್ಡಾತಿಡ್ಡ ಅಲ್ಲದ, ಅರ್ಥಾತ್ ಸುಂದರ, ಸುರೂಪ).

**ಲಗ್** ಕ್ರಿ. (ಹೊಂದು). ಲಗ್ನ (ವಧೂವರರ ಹೊಂದುವಿಕೆ); ವಿಲಗ್ನ (ಅಗಲಿದ, ಹೊಂದದಂಥ); ಸಂಲಗ್ನ (ಹೊಂದಿದ, ಕೂಡಿದ).

**ಲಘ್** ಕ್ರಿ. (ಹಗರಾಗು). ಲಘು (ಹಗರ); ಲಘ್ವೀ; ಲಾಘವ; ಲಾಘವೀ.

**ಲಜ್ಜ್** ಕ್ರಿ. (ನಾಚು). ಲಜ್ಜಾ; ಲಜ್ಜಿತ; ನಿರ್ಲಜ್ಜ (ನಾಚಿಕೆಗೆಟ್ಟ); ಸಲಜ್ಜ (ನಾಚಿಕೆಯುಳ್ಳ).

**ಲಭ್** ಕ್ರಿ. (ದೊರಕು). ಲಬ್ಧ (ದೊರಕಿದ); ಲಭ್ಯ; ಲಾಭ; ಅಲಭ್ಯ (ಸಿಕ್ಕದಂಥ); ದುರ್ಲಭ; ಸುಲಭ.

**ಲಪ್** ಕ್ರಿ. (ಮಾತಾಡು). ಲಪನ (ಬಾಯಿ); ಅಪಲಾಪ (ಸದರ ನುಡಿ); ಆಲಾಪ (ಸಂಭಾಷಣೆ); ಪ್ರಲಾಪ; ವಿಲಾಪ; ಸಂಲಾಪ (ಇಬ್ಬರ ನಡುವೆ ನಡೆದ ಮಾತು).

**ಲಷ್** ಕ್ರಿ. (ಬಯಿಸು). ಲಷಿತ; ಅಭಿಲಾಷ (ಬಯಕೆ); ಅಭಿಲಾಷೀ.

**ಲಸ್** ಕ್ರಿ. (ಆಡು, ಕುಣಿ). ಲಸಿತ; ಲಾಸ್ಯ (ಕುಣಿತ); ಆಲಸ (ಕೆಲಸ ಬೇಡದವ, ಸೋಮಾರಿ); ಆಲಸ್ಯ; ಉಲ್ಲಾಸ; ವಿಲಾಸ; ವಿಲಾಸೀ.

**ಲಾಞ್ಛ್** ಕ್ರಿ. (ಗುರ್ತು ಮಾಡು). ಲಾಂಛನ (ಗುರ್ತು, ಕಳೆ, ಕುಂದು); ಲಾಂಛಿತ; ಮೃಗಲಾಂಛನ (ಮೃಗದ ಚಿಹ್ನ ಉಳ್ಳವ, ಚಂದ್ರ).

**ಲೀ** ಕ್ರಿ. (ಕೂಡಿ ಹೋಗು, ಒಂದಾಗು). ಲಯ (ಚಿತ್ತದ ಏಕಾಗ್ರತೆ); ಲೀನ (ಏಕಾಗ್ರಚಿತ್ತವಾದವ); ಆಲಯ (ಕೂಡಿ ಇರುವ ಸ್ಥಳ, ಮನೆ); ನಿಲಯ.

**ಲಿಖ್** ಕ್ರಿ. (ಬರೆ). ಲಿಖಿತ; ಲೇಖ [ಲೆಕ್ಕ]; ಲೇಖಕ; ಲೇಖನ; ಲೇಖನೀ [ಲೆಕ್ಕಣಿಕೆ]; ಉಲ್ಲೇಖ (ಮೇಲೆ ಕಂಡು ಬರುವಂಥ, ಅರ್ಥಾತ್ ಸ್ಪಷ್ಟವಾದ ಬರಹ); ಶಿಲಾಲೇಖ (ಕಲ್ಲ ಮೇಲಿನ ಬರಹ).

**ಲಿಪ್** ಕ್ರಿ. (ಸಾರಿಸು, ಬರೆ). ಲಿಪಿ (ಬರಹ); ಲಿಪ್ತ (ಸಾರಿಸಿದ); ಲೇಪ; ಲೇಪನ; ಅನುಲೇಪನ; ನಿರ್ಲಿಪ್ತ (ಮೈಗೆ ಏನೇನು ಹತ್ತಗೊಡದಂಥವ, ಶುದ್ಧ); ನಿರ್ಲೇಪ; ವಿಲೇಪನ; ಸಂಲೇಪನ.

**ಲಿಹ್** ಕ್ರಿ. (ನೆಕ್ಕು). ಲೇಹ (ನೆಕ್ಕಿ ತಿನ್ನುವಂಥ ಪದಾರ್ಥ); ಲೇಹ್ಯ; ಮಧುಲಿಹ್ (ಹೂವಿನ ರಸ ನೆಕ್ಕುವದು, ಗುಂಗೀ ಹುಳ).

**ಲುಠ್** ಕ್ರಿ. (ಸುಲಿಕೊಳ್ಳು). ಲುಂಠನ [ಲೂಟು]; ಲುಠಿತ; ವಿಲುಂಠನ.

**ಲುಪ್** ಕ್ರಿ. (ಇಲ್ಲದ ಹಾಗಾಗು). ಲುಪ್ತ (ಇಲ್ಲದ ಹಾಗಾದ); ಲೋಪ; ಲೋಪಕ.

**ಲುಭ್** ಕ್ರಿ. (ಬಯಿಸು). ಲುಬ್ಧ (ಹಗಲೆಲ್ಲ ಹೆಚ್ಚೆಚ್ಚು ಬೇಕೆಂದು ಬಯಿಸುವವ); ಲೋಭ; ಲೋಭೀ; ನಿರ್ಲೋಭ; ನಿರ್ಲೋಭೀ.

**ಲೋಚ್** ಕ್ರಿ. (ನೋಡು). ಲೋಚನ (ಕಣ್ಣು); ಆಲೋಚನಾ (ಯಾವದೊಂದು ಕೆಲಸಕ್ಕೆ ಕೈ ಹಾಕದಕ್ಕಿಂತ ಮುಂಚಿತವಾಗಿ ಅದರ ಗುಣಾ ದೋಷಗಳನ್ನಾಗಲಿ ಸಾಧಕ ಬಾಧಕಗಳನ್ನಾಗಲಿ ವಿಚಾರಿಸಿ ನೋಡೋಣ); ಆಲೋಚಿತ.

**ವಚ್** ಕ್ರಿ. (ಮಾತಾಡು). ಉಕ್ತ (ಮಾತಾಡಿದ, ಹೇಳಿದ); ಉಕ್ತಿ; ವಕ್ತ್ರ (ಬಾಯಿ); ವಕ್ತಾ; ವಚನ; ವಾಕ್ಯ; ವಾಚನ; ವಾಚಾ; ವಾಚಾಲ (ಬಹಳ ಮಾತಾಡುವವ); ವಾಚಿಕ (ಬಾಯಿಮಾತಿಲಿ ಹೇಳಿದ); ಅಭಿವಚನ; ಪ್ರತಿವಚನ.

**ವಂಚ್** ಕ್ರಿ. (ಮೋಸಗೊಳಿಸು). ವಂಚಕ (ಮೋಸಗಾರ); ವಂಚನಾ; ವಂಚಿತ.

**ವದ್** ಕ್ರಿ. (ಮಾತಾಡು). ವದನ (ಬಾಯಿ); ವಾದ; ವಾದೀ (ಜನರ ಮುಂದೆ ನಿಂತು ತನ್ನ ಮತ ಹೇಳುವವ); ವಾದ್ಯ; ಅಪವಾದ (ಕೆಟ್ಟ ಮಾತು); ಪ್ರತಿವಾದೀ (ವಾದಿಗೆ ಎದುರಾಗಿ ಮಾತಾಡುವವ); ವಿವಾದ; ಸಂವಾದ.

**ವಂದ್** ಕ್ರಿ. (ಎರಗು). ವಂದನ (ನಮಸ್ಕಾರ); ವಂದನೀಯ; ವಂದಿತ; ವಂದ್ಯ; ಅಭಿವಂದನ.

**ವಮ್** ಕ್ರಿ. (ಕಾರು). ವಮನ (ಕಾರಿಕೆ); ವಾಮಕ (ಕಾರಿಕೆ ಹುಟ್ಟಿಸುವ ಔಷಧ).

**ವಯ್** ಕ್ರಿ. (ಹೋಗು). ವಯಸ್ಸು (ಹುಟ್ಟಿದಂದಿನಿಂದ ಹೋಗುವ ಕಾಲ); ವಯಸ್ಕ (ವಯಸ್ಸು ಆದವ, ದಿನ ಹೋದವ); ಪೂರ್ವವಯಸ್ಕ; ಸಮವಯಸ್ಕ (ವಾರಿಗೆಯವ).

**ವರ್ಚ್** ಕ್ರಿ. (ಬೆಳಗು). ವರ್ಚಸ್ಸ (ಬೆಳಕು, ತೇಜ); ವರ್ಚಸ್ವಿ; ವರ್ಚಸ್ವೀ.

**ವರ್ಣ್** ಕ್ರಿ. (ಬಣ್ಣಾ ಕೊಡು, ಬಣ್ಣಿಸು). ವರ್ಣ [ಬಣ್ಣ]; ವರ್ಣನ; ವರ್ಣನೀಯ; ವರ್ಣಿತ; ಅವರ್ಣನೀಯ; ವಿವರ್ಣ (ಕೆಟ್ಟ ಬಣ್ಣಾದ, ವಿಜಾತೀಯ); ಸವರ್ಣ; ಸುವರ್ಣ.

**ವಲ್** ಕ್ರಿ. (ಸುತ್ತು). ವಲಯ [ಬಳಿ]; ವಲ್ಲೀ [ಬಳ್ಳಿ].

**ವಶ್** ಕ್ರಿ. (ಅಧೀನದಲ್ಲಿಡು). ವಶ; ವಶೀ; ವಶ್ಯ; ಅವಶ್ಯ; ಆವಶ್ಯಕ; ವಿವಶ (ಸ್ವಾಧೀನ ತಪ್ಪಿದವ, ಎಚ್ಚರ ತಪ್ಪಿದವ).

**ವಸ್** ಕ್ರಿ. (ಹೊದ್ದುಕೊಳ್ಳು). ವಸನ; ವಸ್ತ್ರ; ವಾಸ; ಅಂಗವಸ್ತ್ರ (ಮೈ ಮೇಲೆ ತಕ್ಕೊಳ್ಳತಕ್ಕ ಹೊದಿಕೆ); ಉಪವಸ್ತ್ರ (ಸಣ್ಣಾ ಹೊದಿಕೆ, ಪಂಜಿ).

**ವಹ್** ಕ್ರಿ. (ಹೊರು, ಒಯ್ಯು). ವಹನ; ವಾಹ; ವಾಹಕ; ವಾಹನ; ಆವಾಹನ (ಹೊತ್ತು ಒಯ್ಯೋಣಾ, ಕರೆತರೋಣ); ನಿರ್ವಾಹ (ಪೋಷಣಾ); ವಿವಾಹ (ಲಗ್ನ).

**ವಾ** ಕ್ರಿ. (ಬೀಸು). ವಾತ (ಗಾಳಿ); ವಾತ್ಯಾ (ಬಿರುಗಾಳಿ); ವಾಯು [ಬಾವು].

**ವಾಂಛ್** ಕ್ರಿ. (ಬಯಿಸು). ವಾಂಛಾ; ವಾಂಛಿತ.

**ವಿಚ್** ಕ್ರಿ. (ವಿಚಾರ ಮಾಡು). ವಿವೇಕ; ವಿವೇಕೀ; ವಿವೇಚನ (ಒಳ್ಳಿತು ಕೇಡುಗಳನ್ನು ವಿಚಾರಿಸಿ ನೋಡೋಣ); ಅವಿವೇಕ; ಅವಿವೇಕೀ.

**ವಿಜ್** ಕ್ರಿ. (ಅಂಜು). ವೇಗ; ವೇಗವಾನ್; ಉದ್ವಿಗ್ನ (ಅಂಜಿದವ); ಉದ್ವೇಗ.

**ವಿದ್** ಕ್ರಿ. (ತಿಳಿ). ವಿದಿತ; ವಿದ್ಯಾ; ವಿದ್ವಾನ್ (ತಿಳಿದವ, ಜಾಣ); ವೇದ (ತಿಳವಳಿಕೆಯ ಬೀಡು; ಇದರ ಮೇಲಿಂದ: ಪ್ರಾಚೀನ ಆರ್ಯ ಜನರ ಧರ್ಮ ಆಚಾರ ವಿಚಾರ ಮುಂತಾದವುಗಳ ಸಂಗ್ರಹದ ಗ್ರಂಥಗಳು); ವೇದಾಂತ; ವೇದಾಂತಿ; ವೈದಿಕ (ವೇದದಲ್ಲಿ ಹೇಳಿದ, ವೇದ ಕಲಿತ).

**ವಿಶ್** ಕ್ರಿ. (ಹೊಗು, ಶೇರು). ವಿಶ್ವ (ದೇವರು ಶೇರಿರುವ ಅವಕಾಶ); ವೇಶ (ಶರೀರವನ್ನು ಶೇರಿಸುವದಕ್ಕಾಗಿ ಮಾಡಿದ ವಸ್ತ್ರಗಳು); ಆವಿಷ್ಟ (ಹೊಕ್ಕ); ಆವೇಶ (ಮೈಹೊಗೋಣ); ನಿವೇಶ (ಮನೆ); ಪ್ರವೇಶ (ಹೊಗೋಣ); ಸಂವಿಷ್ಟ (ಹೊಕ್ಕ, ಶೇರಿದ, ಕೂತುಕೊಂಡಂಥ); ಸಂವೇಶ.

**ವಿಷ್** ಕ್ರಿ. (ತುಂಬು, ವ್ಯಾಪಿಸು). ವಿಷ; ವಿಷ್ಣು (ವಿಶ್ವವನ್ನು ತುಂಬಿಕೊಂಡಿರುವವ).

**ವೃಧ್** ಕ್ರಿ. (ಬೆಳೆ). ವರ್ಧನ (ಬೆಳೆಯೋಣ); ವರ್ಧಿತ; ವಾರ್ಧಕ್ಯ (ಮುಪ್ಪು); ವೃದ್ಧ (ಬೆಳೆದವ; ಇದರ ಮೇಲಿಂದಲೇ ರೂಢವಾಗಿ, ಮುದುಕ); ವೃದ್ಧಿ (ಬೆಳವಣಿಗೆ; ಕೂಸು ಹುಟ್ಟಿದ ಮೊದಲಿನ ಹತ್ತು ದಿವಸ).

**ವೃಶ್ಚ್** ಕ್ರಿ. (ಕಡಿ). ವೃಶ್ಚಿಕ (ಚೇಳು). ವ್ರಶ್ಚನ (ಕಡಿಯುವ ಸಾಧನ, ಕೊಡ್ಲೆ).

**ವೃಷ್** ಕ್ರಿ. (ಸಿಡಿಸು, ಮಳೆ ಗರೆ). ವರ್ಷ (೧ ಮಳೆ; ೨ ಹನ್ನೆರಡು ತಿಂಗಳ ಅವಧಿ. ಹಿಂದುಸ್ಥಾನದಲ್ಲಿ ಮಳೆಗಾಲ ನಿಯಮಿತ ಕಾಲಕ್ಕೆ ಉಂಟಾಗುವದರಿಂದ ಮೊದಲಿನವರು ಕಾಲಮಾಪನದಲ್ಲಿ ಮಳೆಗಾಲದಿಂದ ಮಳೆಗಾಲದ ವರೆಗೆ ಒಂದು ವರ್ಷವೆಂದು ಹೆಸರು ಕೊಟ್ಟರು); ವೃಷ್ಟಿ; ಅತಿವೃಷ್ಟಿ; ಅನಾವೃಷ್ಟಿ; ಅವರ್ಷಣ; ಸುವೃಷ್ಟಿ.

**ವೇಷ್ಟ್** ಕ್ರಿ. (ಸುತ್ತು). ವೇಷ್ಟನ; ವೇಷ್ಟಿತ; ಆವೇಷ್ಟನ; ಪರಿವೇಷ್ಟನ; ಸಂವೇಷ್ಟನ.

**ವ್ಯಥ್** ಕ್ರಿ. (ತೂತು ಕೆಡವು). ವಿದ್ಧ; ವೇಧ [ವೆಜ್ಜ]; ವೇಧಿತ; ನಿರ್ವೇಧ (ಛಿದ್ರವಿಲ್ಲದೆ, ನೆಟ್ಟಗೆ, ಚನ್ನಾಗಿ).

**ಶಕ್** ಕ್ರಿ. (ಸಮರ್ಥನಾಗು). ಶಕ್ತ; ಶಕ್ತಿ; ಶಕ್ಯ; ಅಶಕ್ತ; ನಿಃಶಕ್ತ; ಸಶಕ್ತ; ಸರ್ವಶಕ್ತಿ (ಸರ್ವ=ಎಲ್ಲ, ಬೇಕಾದ್ದು; ಬೇಕಾದ್ದು ಮಾಡ ತಕ್ಕ ತ್ರಾಣವುಳ್ಳ).

**ಶಂಕ್** ಕ್ರಿ. (ಸಂಶಯಗೊಳ್ಳು). ಶಂಕಾ; ಶಂಕಿತ; ಆಶಂಕಾ (ಸಂಶಯ); ಆಶಂಕಿತ; ನಿಃಶಂಕ (ಸಂಶಯವಿಲ್ಲದವ); ಸಶಂಕ (ಶಂಕಾಯುಕ್ತ); ಸಾಶಂಕ.

**ಶಪ್** ಕ್ರಿ. (ಕೆಟ್ಟ ಮಾತಾಡು). ಶಪಥ (ಆಣೆ); ಶಪ್ತ; ಶಾಪ.

**ಶಮ್** ಕ್ರಿ. (ಕಡಿಮೆಯಾಗು, ಇಳಿ) ಶಮ (ಮನೋವೃತ್ತಿಗಳನ್ನು ಕಡಿಮೆ ಮಾಡುವ, ಅರ್ಥಾತ್, ನಿಗ್ರಹಿಸುವ, ಶಕ್ತಿ); ಶಮನ; ಶಾಂತ; ಶಾಂತಿ; ಶಾಮಕ; ಉಪಶಮ (ಬೇನೆ ಕಡಿಮೆಯಾಗೋಣ).

**ಶಂಸ್** ಕ್ರಿ. (ಹೊಗಳು). ಶಂಸನ; ಶಂಸಾ; ಪ್ರಶಂಸನ (ಹೊಗಳಿಕೆ); ಪ್ರಶಂಸಾ; ಪ್ರಶಸ್ತ (ಹೊಗಳಿದ, ಯೋಗ್ಯ).

**ಶಾಖ್** ಕ್ರಿ. (ಹಬ್ಬು, ಪಸರಿಸು). ಶಾಖಾ (ಟೊಂಗೆ); ಶಾಖೀ (ಗಿಡ); ಶಾಖಾಮೃಗ (ಗಿಡಗಳ ಟೊಂಗೇ ಮೇಲೆ ಇರುವ ಮೃಗ, ಮಂಗ).

**ಶಾಸ್** ಕ್ರಿ. (ಆಳು). ಶಾಸನ; ಶಾಸಿತ; ಶಾಸ್ತಾ; ಶಾಸ್ತ್ರ; ಶಾಸ್ತ್ರೀ (ಶಾಸ್ತ್ರ ಓದಿದವನು); ಶಾಸ್ತ್ರೀಯ; ಅಶಾಸ್ತ್ರ; ಸಶಾಸ್ತ್ರ.

**ಶಿಕ್ಷ್** ಕ್ರಿ. (ಕಲಿ). ಶಿಕ್ಷಕ; ಶಿಕ್ಷಣ; ಶಿಕ್ಷಾ; ಶಿಕ್ಷಿತ; ಶಿಕ್ಷ್ಯ; ಸುಶಿಕ್ಷಿತ.

**ಶಿಷ್** ಕ್ರಿ. (ಇರು, ಹೋಗಲಾಗಿ ಇರು). ಶೇಷ; ಅಶೇಷ (ಏನೇನು ಇರಗೊಡದೆ, ಯಾವತ್ತು); ಅವಶಿಷ್ಟ; ಅವಶೇಷ; ಉಚ್ಛಿಷ್ಟ (ತಿಂದು ಉಳಿದದ್ದು, ಎಂಜಲ); ನಿಃಶೇಷ; ಸಶೇಷ.

ಶಿಷ್ ಕ್ರಿ. (ಗುಣ ತೋರಿಸು). ಶಿಷ್ಟ; ವಿಶಿಷ್ಟ; ವಿಶೇಷ (ಹೆಚ್ಚಿನ ಗುಣ). ವಿಶೇಷಣ; ವಿಶೇಷ್ಯ.

ಶೀ ಕ್ರಿ. (ಬೀಳು, ಮಲಗು). ಶಯನ; ಶಯನೀಯ; ಶಯಿತ (ಮಲಗಿದ); ಶಯ್ಯಾ (ಹಾಸಿಗೆ).

ಶುಚ್ ಕ್ರಿ. (ಶೋಕ ಮಾಡು; ಗೋಳಾಡು). ಶೋಕ; ಶೋಚನ; ಶೋಚನೀಯ; ಶೋಚ್ಯ; ಅಶೋಕ; ವಿಶೋಕ (ಶೋಕವಿಲ್ಲದ).

ಶುಚ್ ಕ್ರಿ. (ಶುದ್ಧ ಮಾಡು), ಶುಚಿ; ಶುಚಿತಾ; ಶೌಚ; ಅಶೌಚ (ಸೂತಕ).

ಶುಧ್ ಕ್ರಿ. (1) (ಪವಿತ್ರ ಮಾಡು). ಶುದ್ಧ; ಶುದ್ಧಿ; ಶೋಧನ; ಅಶುದ್ಧ; ವಿಶುದ್ಧ; ಸಂಶುದ್ಧ.

(2) (ಗೊತ್ತು ಹಚ್ಚು). ಶುದ್ಧಿ [ಸುದ್ದಿ]; ಶೋಧ; ಶೋಧಕ; ಶೋಧನ; ಶೋಧನೀಯ; ಶೋಧಿತ.

ಶುಭ್ ಕ್ರಿ. (ಚಂದಗಾಣು). ಶುಭ; ಶೋಭನ; ಶೋಭಾ; ಶೋಭಾಯಮಾನ; ಶೋಭಿತ; ಅಶುಭ; ವಿಶೋಭಿತ (ಚಂದಗೆಟ್ಟ); ಸಂಶೋಭಿತ.

ಶುಷ್ ಕ್ರಿ. (ಬಣಗು). ಶುಷ್ಕ; ಶೋಷ; ಶೋಷಕ; ಶೋಷಣ; ವಿಶೋಷ; ವಿಶೋಷಣ; ಸಂಶೋಷ; ಸಂಶೋಷಣ.

ಶೂಲ್ ಕ್ರಿ. (ನೋವು ಮಾಡು). ಶೂಲ; [ಶೂಲಿ]; ತ್ರಿಶೂಲ.

ಶ್ರಮ್ ಕ್ರಿ. (ದಣಿ). ಶ್ರಮ; ಶ್ರಾಂತ; ಶ್ರಾಂತಿ; ಪರಿಶ್ರಮ; ಪರಿಶ್ರಾಂತ; ವಿಶ್ರಮ (ದಣಿವು ಆರಿಸಿಕೊಳ್ಳೋಣ); ವಿಶ್ರಾಂತ; ವಿಶ್ರಾಂತಿ.

ಶ್ರಿ ಕ್ರಿ. (ಹೊಂದಿಕೊಂಡಿರು). ಆಶ್ರಯ (ಆಧಾರ); ಆಶ್ರಿತ; ನಿರಾಶ್ರಯ; ನಿರಾಶ್ರಿತ; ರಾಜಾಶ್ರಯ.

ಶ್ರು ಕ್ರಿ. (ಕೇಳು). ಶ್ರವಣ; ಶ್ರಾವ್ಯ; ಶ್ರುತ; ಶ್ರುತಿ (ಕಿವಿ, ಕರ್ಣಪರಂಪರೆಯಿಂದ ಕೇಳಿಕೊಳ್ಳುತ್ತಾ ಬಂದ ಗ್ರಂಥ, ವೇದ); ಶ್ರೋತಾ; ಶ್ರೋತ್ರ; ಶ್ರೋತ್ರಿಯ (ವೇದಾಧ್ಯಯನ ಮಾಡಿದವ); ವಿಶ್ರುತ (ಎಲ್ಲರೂ ಕೇಳಿದಂಥ, ಪ್ರಸಿದ್ಧ); ಸುಶ್ರುತ.

ಶ್ಲಾಘ್ ಕ್ರಿ. (ಹೊಗಳು, ಸ್ತುತಿಸು). ಶ್ಲಾಘನ; ಶ್ಲಾಘನಾ; ಶ್ಲಾಘನೀಯ; ಶ್ಲಾಘ್ಯ; ಅಶ್ಲಾಘ್ಯ.

ಶ್ಲಿಷ್ ಕ್ರಿ. (ಕೂಡು, ಹೊಂದು). ಶ್ಲೇಷ (ಎರಡು ಅರ್ಥಗಳ ಕೂಡುವಿಕೆ); ಆಶ್ಲೇಷ (ಅಪ್ಪಿಕೊಳ್ಳೋಣ); ವಿಶ್ಲೇಷ (ಅಗಲುವಿಕೆ); ಸಂಶ್ಲೇಷ (ಹೊಂದಿಕೆ).

ಶ್ವಸ್ ಕ್ರಿ. (ಉಸುರು ಆಡು); ಶ್ವಸನ (ಗಾಳಿ); ಶ್ವಾಸ; ಆಶ್ವಾಸನ (ಭಯಗೊಂಡವರಿಗೆ, ಉಸುರು, ಅರ್ಥಾತ್ ಧೈರ್ಯ ಕೊಡೋಣ); ಉಚ್ಛ್ವಾಸ (ಉಸುರು ಬಿಡೋಣ); ನಿಶ್ವಾಸ (ನಿಟ್ಟುಸುರು); ವಿಶ್ವಾಸ (ನಂಬಿಗೆ).

ಷಷ್ ಎ. (ಆರು). ಷಷ್ಠ; ಷಷ್ಠೀ (ಆರನೇ ತಿಥಿ); ಷಟ್ಕರ್ಮ (ಕರ್ಮ=ಮಾಡ ತಕ್ಕ ವಿಧಾನ; ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಎಂಬವಾರು ಬ್ರಾಹ್ಮಣರು ಮಾಡ ತಕ್ಕ ಕರ್ಮಗಳು); ಷಣ್ಮುಖ (ಮುಖ=ಮೋರೆ; ಆರು ಮೋರೆಯುವ, ಶಿವನ ಮಗ ಕಾರ್ತಿಕೇಯ).

ಸಪ್ತ ವಿ. (ಏಳು). ಸಪ್ತಕ; ಸಪ್ತಮ (ಏಳನೆಯವ); ಸಪ್ತಮೀ (ಏಳನೆಯ ತಿಥಿ); ಸಪ್ತಾಹ (ಅಹಸ್=ದಿವಸ; ಏಳು ದಿವಸಗಳು).

ಸಮ್ ಕ್ರಿ. (ಸರಿಯಾಗು). ಸಮ; ಸಾಮ್ಯ; ವಿಷಮ [ಬೆಸ]; ವೈಷಮ್ಯ (ಭೇದ, ವೈರ).

**ಸಹ್** ಕ್ರಿ. (ತಡೆ, ತಾಳು). ಸಹನ; ಸಹಿಷ್ಣು; ಸಹ್ಯ; ಅಸಹ್ಯ (ತಡೆಯಲಾಗದ); ದುಃಸಹ; ಸುಸಹ.

**ಸಿಚ್** ಕ್ರಿ. (ಉಗ್ಗು, ಶಿಂಪಡಿಸು). ಸಿಕ್ತ; ಸೇಕ; ಸೇಚನ; ಅಭಿಷಿಕ್ತ; ಅಭಿಷೇಕ; ಅಭಿಷೇಚನ; ಮೂರ್ಧಾಭಿಷಕ್ತ (ಮೂರ್ಧಾ=ತಲೆ; ತಲೆ ಮೇಲಿಂದ ಅಭಿಷೇಕವಾದವ, ಕ್ಷತ್ರಿಯ); ರಾಜ್ಯಾಭಿಷೇಕ.

**ಸಿಧ್** ಕ್ರಿ. (ಕೈಗೂಡಿ ಬರು). ಸಾಧಕ; ಸಾಧನ (ಯಾವದೊಂದು ಕೆಲಸ ಕೈಗೂಡಿ ಬರತಕ್ಕ ಹಂಚಿಕೆ) ಸಾಧಿತ; ಸಾಧು (ಇಂದ್ರಿಯ ನಿಗ್ರಹ ಕೈಗೂಡಿ ಬಂದವ); ಸಿದ್ಧ; ಸಿದ್ಧಿ (ಕೈಗೂಡುವಿಕೆ); ನಿಷಿದ್ಧ; ಪ್ರಸಿದ್ಧ.

**ಸು, ಸೂ** ಕ್ರಿ. (ಹಡೆ). ಸುತ (ಮಗ); ಸೂತಿಕ (ಹಡದಾಕೆ); ಪ್ರಸವ; ಪ್ರಸವನ; ಪ್ರಸೂತಿ (ಸಂತತಿ).

**ಸುಖ್** ಕ್ರಿ. (ಚನ್ನಾಗಿರು) ಸುಖ; ಸುಖೀ; ಸೌಖ್ಯ.

**ಸೂಚ್** ಕ್ರಿ. (ಸನ್ನೀ ಮಾಡು). ಸೂಚಕ; ಸೂಚನ; ಸೂಚನಾ; ಸೂಚಿತ.

**ಸೃ** ಕ್ರಿ. (ಹೋಗು, ತಿರಗಾಡು). ಸರಣ (ಹೋಗೋಣ); ಅಪಸರಣ (ಹಿಂದೆ ತಿರುಗೋಣ); ಅನುಸರಣ (ಹಿಂದೆ ಹೋಗೋಣ); ಉತ್ಸಾರಣ (ಹೊರಗೆ ಹೋಗ ಮಾಡೋಣ, ನೂಕಿಸೋಣ); ನಿಸ್ಸರಣ; ನಿಸ್ಸಾರಣ; ಪ್ರಸಾರ (ನಾಲ್ಕು ಕಡಿಗೆ ಹೋಗೋಣ, ಹಬ್ಬೋಣ, ವಿಸ್ತಾರ); ಸಂಸಾರ (ಒಂದು ಜನ್ಮದಿಂದ ಮತ್ತೊಂದಕ್ಕೆ ಹೋಗೋಣ); ಸಂಸಾರೀ.

**ಸೃಜ್** ಕ್ರಿ. (ಕೊಡು, ಉತ್ಪನ್ನ ಮಾಡು). ಸರ್ಗ; ಸೃಷ್ಟ; ಸೃಷ್ಟಿ; ಸ್ರಷ್ಟಾ; ಉತ್ಸರ್ಗ (ಕೊಡೋಣ, ದಾನ); ನಿಸರ್ಗ; (ಹುಟ್ಟುಗುಣ, ಸ್ವಭಾವ); ವಿಸರ್ಗ; ವಿಸರ್ಜನ (ಕೊಟ್ಟುಬಿಡೋಣ, ತ್ಯಾಗ); ಸಂಸರ್ಗ

ಸೃಪ್ ಕ್ರಿ. (ನೆಲದ ಗುಂಟ ಹರಿದು ಹೋಗು); ಸರ್ಪ (ಹಾವು); ಸರ್ಪಿ (ತುಪ್ಪ); ಪರೀಸೃಪ (ನೆಲದ ಗುಂಟ ಹರಿದು ಹೋಗುವ ಪ್ರಾಣಿ).

ಸೇವ್ ಕ್ರಿ. (ಚಾಕರೀ ಮಾಡು). ಸೇವಕ; ಸೇವನ; ಸೇವಾ; ಸೇವಿತ; ಸೇವ್ಯ; ಅಸೇವ್ಯ (ಸೇವಿಸ ತಕ್ಕದ್ದಲ್ಲದ್ದು).

ಸ್ಖಲ್ ಕ್ರಿ. (ಬೀಳು). ಸ್ಖಲನ; ಸ್ಖಲಿತ; ಅಸ್ಖಲಿತ (ಬೀಳದಲೆ, ಬಂಟೆ ಸರಿಯಾಗಿ); ವಿಸ್ಖಲಿತ (ನಡು ನಡುವೆ ಬಿದ್ದಂಥ).

ಸ್ತಭ್ ಕ್ರಿ. (ಹಿಡಿ, ನಿರೋಧ ಮಾಡು). ಸ್ತಬ್ಧ; ಸ್ತಂಭ [ಕಂಭ]; ಸ್ತಂಭನ; ಅವಷ್ಟಂಭ (ನಿರೋಧ); ವಿಷ್ಟಂಭ; ಜಯಸ್ತಂಭ; ದೀಪಸ್ತಂಭ; ಧ್ವಜಸ್ತಂಭ; ರಣಸ್ತಂಭ; (ರಣ=ಕಾಳಗದ ಭೂಮಿ; ಅಲ್ಲಿ ನಡಿಸಿದ ಕಂಬ).

ಸ್ತು ಕ್ರಿ. (ಹೊಗಳು). ಸ್ತವ; ಸ್ತವನ; ಸ್ತಾವಕ; ಸ್ತುತ; ಸ್ತುತಿ; ಸ್ತುತ್ಯ; ಸ್ತೋತಾ; ಸ್ತೋತ್ರ.

ಸ್ತೃ ಕ್ರಿ. (ಹಾಸು, ಪಸರಿಸು, ಮುಚ್ಚು); ಆಸ್ತರಣ (ಹಾಸಿಕೆ); ವಿಸ್ತರ (ಪಸರಿಸುವಿಕೆ); ವಿಸ್ತಾರ; ವಿಸ್ತೀರ್ಣ; ವಿಸ್ತೃತ; ಸಿಸ್ತರಣ; ಸಂಸ್ತೃತ.

ಸ್ಥಾ ಕ್ರಿ. (ಇರು, ನಿಲ್ಲು). ಸ್ಥಾನ; ಸ್ಥಾಪನ (ಇರಿಸೋಣ); ಸ್ಥಾಪನಾ; ಸ್ಥಾಯಿಕ (ಬಂದೇ ಕಡೆಯಲ್ಲಿ ನಿಲ್ಲುವ); ಸ್ಥಾವರ; ಸ್ಥಿತಿ; ಅನುಷ್ಠಾನ (ಸಮೀಪದಲ್ಲಿ ನಿಲ್ಲೋಣ; ಇದರ ಮೇಲಿಂದ ಸೇವೆ ಮಾಡೋಣ ಎಂಬ ಅರ್ಥ ಬಂದದೆ); ಅವಸ್ಥಾ; ಆಸ್ಥಾ; ಉತ್ಥಾನ (ಎದ್ದು ನಿಲ್ಲೋಣ); ಪ್ರಸ್ಥಾನ (ಹೊರ ಹೊರಡೋಣ); ಪ್ರತಿಷ್ಠಾ; ಪ್ರತಿಷ್ಠಿತ; ವ್ಯವಸ್ಥಾ; ಸಂಸ್ಥಾ [ಸಂತೆ]; ಸಂಸ್ಥಾನ.

ಸ್ನಾ ಕ್ರಿ. (ಮೈ ತೊಳೆಕೊಳ್ಳು). ಸ್ನಾತ; ಸ್ನಾತಕ; ಸ್ನಾನ; ನಿಷ್ಣಾತ; ಸುಸ್ನಾತ; ಮಂಗಲಸ್ನಾನ (ಮಂಗಲ=ಶುಭಕಾರ್ಯ; ಶುಭಕಾರ್ಯದಲ್ಲಿ ಮಾಡುವ ಸ್ನಾನ).

ಸ್ನಿಹ್ ಕ್ರಿ. (ಪ್ರೀತಿ ಮಾಡು). ಸ್ನೇಹ; ಸ್ನೇಹೀ.

ಸ್ಪರ್ಧ್ ಕ್ರಿ. (ಹಗೆತನ ಮಾಡು). ಸ್ಪರ್ಧಾ; ಸ್ಪರ್ಧೀ; ಪ್ರತಿಸ್ಪರ್ಧೀ (ಎದುರಾಳಿ)

ಸ್ಪೃಶ್ ಕ್ರಿ. (ಮುಟ್ಟು). ಸ್ಪರ್ಶ; ಸ್ಪರ್ಶನ (ಎಲ್ಲ ವಸ್ತುಗಳನ್ನು ಮುಟ್ಟುವದು, ಗಾಳಿ); ಸ್ಪೃಶ್ಯ; ಸ್ಪೃಷ್ಟ; ಅಸ್ಪರ್ಶ (ಮುಡಚಟ್ಟು).

ಸ್ಪೃಹ್ ಕ್ರಿ. (ಬಯಿಸು). ಸ್ಪೃಹಾ; ನಿಃಸ್ಪೃಹ (ಆಶೆಯಿಲ್ಲದವ); ಸಸ್ಪೃಹ (ಆಶೆಯುಳ್ಳವ).

ಸ್ಫುರ್ ಕ್ರಿ. (ಆವೇಶ ಬರು). ಸ್ಫುರಣ; ಸ್ಫೂರ್ತಿ.

ಸ್ಮಿ ಕ್ರಿ. (ನಗು). ಸ್ಮಯ; ಸ್ಮಿತ; ಸ್ಮೇರ (ನಗುವ): ವಿಸ್ಮಯ (ಆಶ್ಚರ್ಯ); ವಿಸ್ಮಿತ.

ಸ್ಮೃ ಕ್ರಿ. (ನೆನಿಸು). ಸ್ಮರಣ; ಸ್ಮಾರ್ತ (ಸ್ಮೃತಿಗೆ ಅನುಸರಿಸಿ ನಡೆಯುವವ); ಸ್ಮೃತ; ಸ್ಮೃತಿ (ನೆನಪು; ಹಿಂದಿನ ಕೆಲವು ಋಷಿಗಳು ಗುರು ಪರಂಪರೆಯಿಂದ ಬಾಯಿಲಿ ಕಲಿತು ಮುಂದೆ ಬರೆದಿಟ್ಟ ಧರ್ಮಗ್ರಂಥಗಳು): ಅಪಸ್ಮಾರ (ನೆನಪು ಹಾರಿಸುವ ರೋಗ, ಮಲರೋಗ); ವಿಸ್ಮರಣ; ವಿಸ್ಮೃತಿ.

ಸ್ರು ಕ್ರಿ. (ಸೋರು). ಸ್ರವ; ಸ್ರವಣ; ಸ್ರಾವ; ಸ್ರಾವೀ; ಸ್ರುತ; ಗರ್ಭಸ್ರಾವ (ಗರ್ಭ=ಬಸುರು; ಹಮಿವಡಿಯೋಣ)

ಸ್ವ, ಸ್ವಂ ಸ. (ತಾನು). ಸ್ವಕೀಯ (ತನ್ನವ); ಸ್ವತಃ (ತನ್ನಿಂದ, ತಾನಾಗಿ); ಸ್ವಾಂತ (ಅಂತ=ಅಂತರಂಗ; ಮನಸ್ಸು); ಸ್ವಾರ್ಥ (ಅರ್ಥ=

ಹೇತು, ಉದ್ದೇಶ; ತನ್ನ ಲಾಭದ ಹೇತು); ಸ್ವೇಚ್ಛ (ಇಚ್ಛಾ= ಬಯಿಕೆ; ತನ್ನ ಇಚ್ಛೆಗೆ ಬಂದಂತೆ, ಬೇಕಾದಂತೆ); ಸ್ವಕರ್ಮ; ಸ್ವಜಾತಿ; ಸ್ವಧರ್ಮ; ಸ್ವಭಾವ (ಭಾವ= ಶರೀರಗುಣ; ತನ್ನ ಹುಟ್ಟುಗುಣ).

**ಸ್ವಪ್** ಕ್ರಿ. (ಮಲಗು) ಸ್ವಪ್ನ; ಸ್ವಾಪ (ನಿದ್ದೆ)

**ಸ್ವರ್** ಕ್ರಿ. (ಶಬ್ದಮಾಡು). ಸ್ವರ; ಸ್ವರಿತ; ಅಪಸ್ವರ; ಸುಸ್ವರ.

**ಸ್ವಾದ್** ಕ್ರಿ. (ಸವಿ). ಸ್ವಾದ; ಸ್ವಾದಿತ; ಸ್ವಾದಿಷ್ಟ; ಆಸ್ವಾದ (ರುಚಿ); ಸುಸ್ವಾದ.

**ಹನ್** ಕ್ರಿ. (ಹೊಡಿ, ಕೊಲ್ಲು). [ಈ ಧಾತುವಿಗೆ ವಿಕಾರದಿಂಗ ಘಾ, ಅಥವಾ ವಧ್ ಎಂಬ ರೂಪಗಳು ಆಗುತ್ತವೆ]. ಘಾತ; ಘಾತುಕ; ವಧ; ಹತ; ಹನನ; ಅಪಘಾತ; ಆಘಾತ (ಮೇಲೆ ಹೊಡೆಯೋಣ, ಅಪ್ಪಳಿಸೋಣ); ಪ್ರಘಾತ (ಒಂದೇ ಮಾರ್ಗದಿಂದ ವಿಶೇಷವಾಗಿ ಹೊಡಿಯೋಣ; ಇದರ ಮೇಲಿಂದ ರೂಢಿ, ಪರಿಪಾಠ); ವಿಘಾತ (ವಿಘ್ನ); ಸಂಘಾತ (ಕೂಡಿ ಹೊಡಿಯೋಣ; ಸಮೂಹ, ಗುಂಪು)

**ಹಸ್** ಕ್ರಿ. (ನಗು). ಹಸಿತ; ಹಾಸ; ಹಾಸ್ಯ; ಉಪಹಾಸ; ಉಪಹಾಸ್ಯ; ಪರಿಹಾಸ (ನಗಚಾಟಿಗೆ).

**ಹಾ** ಕ್ರಿ. (ಬಿಡು, ಹಾಳಾಗು). ಹಾನಿ; ಹೀನ; ಹೀನತಾ; ಹೀನತ್ವ; ವಿಹೀನ್ (ಇಲ್ಲದವ).

**ಹಿಂಸ್** ಕ್ರಿ. (ಕೊಲ್ಲು). ಹಿಂಸಕ; ಹಿಂಸನ; ಹಿಂಸಾ (ಕೊಲೆ); ಹಿಂಸ್ರ (ಎರಡನೇ ಪ್ರಾಣಿಗಳನ್ನು ಕೊಂದು ತಿನ್ನುವಂಥ); ಸಿಂಹ (?); ಅಹಿಂಸಾ (ಕೊಲ್ಲದೇ ಇರೋಣ).

**ಹು** ಕ್ರಿ. (ಹವನ ಮಾಡು). ಹವನ; ಹುತ; ಹೋತಾ; ಹೋಮ; ಆಹುತಿ (ಅಗ್ನಿಯಲ್ಲಿ ಹಾಕ ತಕ್ಕ ಅನ್ನ, ತುಪ್ಪ, ಮುಂತಾದ ದ್ರವ್ಯ).

**ಹೃ** ಕ್ರಿ. (ತಕ್ಕೊಳ್ಳು) ಹರ; ಹರಣ; ಹರ್ತೃ; ಹಾರಕ; ಹೃತ; ಅಪಹಾರ (ಮೋಸದಿಂದ ತಕ್ಕೊಳ್ಳೋಣ); ಆಹಾರ (ಅನ್ನ ತಕ್ಕೊಳ್ಳೋಣ); ಉದಾಹರಣ (ದೃಷ್ಟಾಂತ); ಪರಿಹಾರ (ದೂರ ತಕ್ಕೊಳ್ಳೋಣ, ನಿವಾರಣಾ ಮಾಡೋಣ); ಪ್ರಹಾರ; ವಿಹಾರ; ವ್ಯವಹಾರ (ಕೊಡಕೊಳ್ಳೋಣ); ಸಂಹಾರ; ಸಂಹಾರಕ; ಸಂಹಾರಕಾಲ (ಪ್ರಳಯದ ವೇಳೆ)

**ಹೃಷ್** ಕ್ರಿ. (ಸಂತೋಷಪಡು) ಹರ್ಷ; ಹರ್ಷಿತ; ಹೃಷ್ಟ; ಪ್ರಹರ್ಷ (ಪರಮಾನಂದ); ಪ್ರಹೃಷ್ಟ; ಸಂಹರ್ಷ; ಸಂಹೃಷ್ಟ.

**ಹ್ರಸ್** ಕ್ರಿ. (ಸಣ್ಣಾಗು). ಹ್ರಸ್ವ (ಗಿಡ್ಡ); ಹ್ರಾಸ; ಹ್ರಾಸಕ.

**ಹ್ವೇ** ಕ್ರಿ. (ಕರೆ) ಹೂತಿ (ಕರೆಯೋಣ); ಆಹ್ವಾ; ಆಹ್ವಾನ (ಕರೆಯೋಣ); ಸಂಹೂತಿ (ಕೆಲವರು ಕೂಡಿ ಕರೆಯೋಣ)



# ಸೂಚನೆ.

ಈ ಭಾಗವನ್ನು ಕಲಿಸುವದಕ್ಕಿಂತ ಮೊದಲು ಶಿಕ್ಷಕನು ವಿದ್ಯಾರ್ಥಿಗಳಿಗೆ ಕನ್ನಡ ಸ್ವರ ವ್ಯಂಜನ ಸಂಧಿಗಳ ನಿಯಮಗಳನ್ನು ತಿಳಿಸಿ ಕೊಟ್ಟು, ಬಳಿಕ ಕೆಳಗೆ ಬರೆದ ಕೃತ್ ತದ್ಧಿತ ಪ್ರತ್ಯಯಗಳನ್ನು ಕಲಿಸ ಬೇಕು.

ಮೂಲ ಕ್ರಿಯಾಪದಗಳಿಂದ ಹೊಸ ಕ್ರಿಯಾಪದಗಳನ್ನಾಗಲಿ ನಾಮವಾಚಕ ಶಬ್ದಗಳನ್ನಾಗಲಿ ಸಾಧಿಸುವದಕ್ಕೆ ಕ್ರಿಯಾಪದಗಳಿಗೆ ಹಚ್ಚುವ ಪ್ರತ್ಯಯಗಳಿಗೆ ಕೃತ್‍ಪ್ರತ್ಯಯಗಳೆಂಬ ಸಂಜ್ಞೆ. ಈ ಸ್ಥಳ ದಲ್ಲಿ ಹೊಸ ಕ್ರಿಯಾಪದಗಳನ್ನು ಸಾಧಿಸ ತಕ್ಕ ಪ್ರತ್ಯಯಗಳ ವಿಚಾ ರ ಮಾಡ ತಕ್ಕ ಕಾರಣವಿಲ್ಲ; ನಾಮವಾಚಕ ಶಬ್ದಗಳನ್ನು ಸಾಧಿಸ ತಕ್ಕ ಪ್ರತ್ಯಯಗಳನ್ನಷ್ಟು ಹೇಳಿದರೆ ಸಾಕು. ಈ ಪ್ರತ್ಯಯಗಳು ಪ್ರತಿ ಒಂದು ಕ್ರಿಯಾಪದದ ಮೇಲೆ ಬರುತ್ತವೆಂತಲ್ಲ; ಭಾಷೆಯ ನಿಯಮಕ್ಕೆ ಅನುಸರಿಸಿ ಹೆಚ್ಚು ಕಡಿಮೆ ಬರುತ್ತವೆ. ಆದದರಿಂದ ಅವುಗಳ ಬಗ್ಗೆ ಒಂದು ವ್ಯಾಪಕ ನಿಯಮ ಹೇಳಲಿಕ್ಕೆ ಬರುವದಿಲ್ಲ; ಮತ್ತು ಎಷ್ಟೋ ಸಾರಿ ಈ ಪ್ರತ್ಯಯಗಳೊಳಗಿನ ಸ್ವರಾದಿ ಪ್ರತ್ಯಯ ಗಳ ಆದಿಯಲ್ಲಿ ಸ್ವರವು ಲೋಪವಾಗಿ, ಬರೇ ವ್ಯಂಜನಾದಿ ಪ್ರತ್ಯ ಯಗಳೇ ಕ್ರಿಯಾಪದಗಳ ಮೇಲೆ ಬರುತ್ತವೆ. ಇವನ್ನೆಲ್ಲಾ ರೂಢಿ ಯ ಮೇಲಿಂದ ತಿಳಿದುಕೊಳ್ಳ ಬೇಕು. ಕನ್ನಡದಲ್ಲಿ ಪ್ರಯೋಗಿಸು ವ ಮುಖ್ಯ ನಾಮವಾಚಕ ಶಬ್ದಗಳನ್ನು ಸಾಧಿಸ ತಕ್ಕ ಕೃತ್‍ಪ್ರತ್ಯ ಯಗಳು ಯಾವವೆಂದರೆ:—

| | | | |
|---|---|---|---|
| ಅ. | ಬೇಸರು+ಅ=ಬೇಸರ. | ಇಗೆ. | ಮುತ್ತು+ಇಗೆ=ಮುತ್ತಿಗೆ. |
| ಅಕು. | ಹರಿ+ಅಕು=ಹರಕು. | ಇತ. | ಅರಿ+ಇತ=ಅರಿತ. |
| ಅತ. | ಜಡಿ+ಅತ=ಜಡತ. | ಇಲು. | ಮಿಗು+ಇಲು=ಮಿಗಿಲು |
| ಅತಿ. | ಅಳಿ+ಅತಿ=ಅಳತಿ. | ಇವು. | ಅಳಿ+ಇವು=ಅಳಿವು |
| ಅಪು. | ನೆನೆ+ಅಪು=ನೆನಪು. | ಉಪು. | ಬಿರಿ+ಉಪು=ಬಿರುಪು. |
| ಅರ. | ಒತ್ತು+ಅರ=ಒತ್ತರ. | ಉಮೆ. | ಬಲಿ+ಉಮೆ=ಬಲುಮೆ. |
| ಅವು. | ಬರು+ಅವು=ಬರವು. | ಉಹು. | ಕುರು+ಉಹು=ಕುರುಹು. |
| ಅಹು. | ಕರೆ+ಅಹು=ಕರಹು. | ಎ. | ನಗು+ಎ=ನಗೆ. |
| ಇ. | ಸುರಳು+ಇ=ಸುರಳಿ. | ಮೆ. | ತಾಳು+ಮೆ=ತಾಳ್ಮೆ. |
| ಇಕೆ. | ಹೇಳು+ಇಕೆ=ಹೇಳಿಕೆ | | |

ಕ್ರಿಯಾಪದಗಳನ್ನು ಬಿಟ್ಟು ಉಳಿದ ಶಬ್ದಗಳ ಮೇಲೆ ಬರುವ ಪ್ರತ್ಯಯಗಳಿಗೆ ತದ್ಧಿತ ಪ್ರತ್ಯಯಗಳು ಅನ್ನುತ್ತಾರೆ. ಯಾವತ್ತು ಪ್ರತ್ಯಯಗಳು ಪ್ರತಿ ಒಂದು ಶಬ್ದದ ಮೇಲೆ ಬರುತ್ತವೆಂತ ನಿಯಮವಿಲ್ಲ; ಭಾಷೆಯ ನಿಯಮಗಳಿಗೆ ಅನುಸರಿಸಿ ಹೆಚ್ಚು ಕಡಿಮೆ ಬರುತ್ತವೆ. ಅವನ್ನು ರೂಢಿಯ ಮೇಲಿಂದ ಸುಲಭವಾಗಿ ಕಲಿಯಬಹುದು. ಕನ್ನಡದಲ್ಲಿ ಮುಖ್ಯವಾಗಿ ಪ್ರಯೋಗಿಸುವ ತದ್ಧಿತ ಪ್ರತ್ಯಯಗಳು ಯಾವವೆಂದರೆ:—

**ಅಡಿಗ.** ಈ ಪ್ರತ್ಯಯವು, ಇವನು ಇದನ್ನು ಇಕ್ಕುವನು, ಎಂಬ ಅರ್ಥದಲ್ಲಿ ಆಗುವದು. ಉದಾ: ಹೂವಡಿಗ (ಹೂ ಇಕ್ಕುವವನು).

**ಆಯ್ತ.** ಈ ಪ್ರತ್ಯಯವು, ಇವನು ಈ ಪ್ರಯೋಜನವನ್ನು ನಡಿಸುವನು, ಎಂಬ ಅರ್ಥದಲ್ಲಿ ಬರುವದು ಉದಾ: ಕಲ್ಲಾಯ್ತ (ಕಲ್ಕುಟಿಗ).

**ಆರ, ಕಾರ, ಗಾರ.** ಈ ಪ್ರತ್ಯಯಗಳು, ಇವನು ಇದರಲ್ಲಿ ವ್ಯವಹರಿಸುವನು, ಎಂಬ ಅರ್ಥದಲ್ಲಿ ಆಗುವವು. ಉದಾ: ಕುಂಬಾರ (ಕುಂಬ,—ಕೊಡ,—ಮಾಡುವವನು); ಕೈದುಕಾರ (ಶಸ್ತ್ರಗಳಲ್ಲಿ ವ್ಯವಹರಿಸುವವನು); ಮಣಿಗಾರ (ಮಣಿಗಳನ್ನು ಮಾರುವವನು).

**ಆಳಿ, ಕುಳಿ, ಗುಳಿ.** ಈ ಪ್ರತ್ಯಯಗಳು, ಇವನು ಈ ಸ್ವಭಾವದವನು, ಎಂಬ ಅರ್ಥದಲ್ಲಿ ಆಗುವವು. ಉದಾ: ಮಾತಾಳಿ (ಬಹಳ ಮಾತಾಡುವವನು); ಆಡುಕುಳಿ (ಯಾವಾಗಲು ಆಡುವವನು); ಲಂಚಗುಳಿ (ಲಂಚ ತಕ್ಕೊಳ್ಳುವ ಸ್ವಭಾವವುಳ್ಳವನು).

**ಇಗ.** ಈ ಪ್ರತ್ಯಯವು, ಇವನು ಇದನ್ನು ಮಾಡುವನು, ಎಂಬ ಅರ್ಥದಲ್ಲಿ ಆಗುತ್ತದೆ. ಉದಾ: ತೋಟಿಗ (ತೋಟಾ ಮಾಡುವವನು).

**ಇಜ.** ಈ ಪ್ರತ್ಯಯವು, ಇವನು ಇದರೊಳಗೆ ಹುಟ್ಟಿದವನು, ಎಂಬ ಅರ್ಥದಲ್ಲಿ ಆಗುವದು. ಉದಾ: ಅಲರಿಜ (ಹೂವಿನಲ್ಲಿ ಹುಟ್ಟಿದವ, ಬ್ರಹ್ಮ).

**ಉಣಿ.** ಈ ಪ್ರತ್ಯಯವು, ಇವನು ಇದನ್ನು ತಿನ್ನುವನು, ಎಂಬ ಅರ್ಥದಲ್ಲಿ ಆಗುವದು. ಉದಾ: ಎಲರುಣಿ (ಘಾಳಿಯನ್ನು ತಿನ್ನುವದು, ಹಾವು)

**ತನ.** ಈ ಪ್ರತ್ಯಯ ಗುಣವನ್ನು ತೋರಿಸುವದು ಉದಾ: ಜಾಣತನ; ಕಳ್ಳತನ.

**ವಣಿಗ.** ಈ ಪ್ರತ್ಯಯವು, ಇವನು ಇದರಲ್ಲಿ ಅನುಕೂಲವಾಗಿ ಬಾಳುವನು, ಎಂಬ ಅರ್ಥದಲ್ಲಿ ಆಗುವದು. ಉದಾ: ಸಾಲವಣಿಗ (ಸಾಲಗಾರ)

**ವಳ.** ಈ ಪ್ರತ್ಯಯವು, ಇವನು ಈ ಪ್ರಯೋಜನವನ್ನು ನಡಿಸುವನು, ಎಂಬ ಅರ್ಥದಲ್ಲಿ ಬರುವದು. ಉದಾ: ಮಡಿವಳ (ಬಟ್ಟೆಗಳನ್ನು ಒಗೆಯುವವನು, ಅಗಸ)

---

# ಅನುಕ್ರಮಣಿಕೆ.

೮೫. ಕೆಂ
೮೬. ಕೆಡು
೮೭. ಕೆತ್ತು
೮೮. ಕೇಗು
೮೯. ಕೇಳು
೯೦. ಕೈ
೯೧. ಕೊಂಕು
೯೨. ಕೊಂಡಾಡು
೯೩. ಕೊಬ್ಬು
೯೪. ಕೊಯು
೯೫. ಕೊಲ್, ಕೊಲ್ಲು
೯೬. ಗಳಿಸು
೯೭. ಗುದ್ದು
೯೮. ಗುರುಕು
೯೯. ಗೆಲ್, ಗೆಲ್ಲು
೧೦೦. ಚಂ, ಚನ್
೧೦೧. ಚಲ್ಲು
೧೦೨. ಚಿಗಿ
೧೦೩. ಬಿಗಡು
೧೦೪. ಜಡಿ
೧೦೫. ಜರೆ
೧೦೬. ಜರೆ
೧೦೭. ಜಾರು
೧೦೮. ಜೀರು
೧೦೯. ಜೋಲ್
೧೧೦. ತೆಗಲು
೧೧೧. ತಡೆ
೧೧೨. ತಣಿ
೧೧೩. ತಂ, ತಣ್
೧೧೪. ತಲಪು
೧೧೫. ತಳಿ
೧೧೬. ತಳ್ಳು
೧೧೭. ತಾಳು
೧೧೮. ತಿದ್ದು
೧೧೯. ತಿನ್, ತಿನ್ನು
೧೨೦. ತಿರುಗು
೧೨೧. ತಿಳಿ
೧೨೨. ತೀರು
೧೨೩. ತುಡುಕು
೧೨೪. ತುಂಬು
೧೨೫. ತುರು
೧೨೬. ತುಳಿ
೧೨೭. ತೂರು
೧೨೮. ತೆಗಳು
೧೨೯. ತೆರೆ
೧೩೦. ತೊಡು
೧೩೧. ತೊಳಲ
೧೩೨. ತೋರು
೧೩೩. ದಟ್ಟು
೧೩೪. ದಣಿ
೧೩೫. ದುಡಿ
೧೩೬. ದುಮುಕು
೧೩೭. ದೂಡು
೧೩೮. ದೂರು
೧೩೯. ದೊರೆ
೧೪೦. ನೆಗು
೧೪೧. ನಡೆ
೧೪೨. ನಂಬು
೧೪೩. ನಲಿ
೧೪೪. ನಾಟು
೧೪೫. ನಾಣ್ಚು
೧೪೬. ನಾಲ್
೧೪೭. ನಲ್, ನಲ್ಲು
೧೪೮. ನೀರ್
೧೪೯. ನುಡಿ
೧೫೦. ನೆಗಳು
೧೫೧. ನೋಡು
೧೫೨. ಪೆಡು
೧೫೩. ಪಳಿ
೧೫೪. ಪಾರು
೧೫೫. ಪಿಡಿ
೧೫೬. ಪಿರಿ
೧೫೭. ಪುರುಡು
೧೫೮. ಪೂ
೧೫೯. ಪೊಣರು
೧೬೦. ಪೊನ್
೧೬೧. ಪೊಯ್ಯು
೧೬೨. ಪೊಳೆ
೧೬೩. ಬಡಿ
೧೬೪. ಬರು
೧೬೫. ಬರೆ
೧೬೬. ಬರೆ
೧೬೭. ಬಲಿ
೧೬೮. ಬಾಗು
೧೬೯. ಬಾಚು
೧೭೦. ಬಾನ್
೧೭೧. ಬಾಳು
೧೭೨. ಬಿಗಿ
೧೭೩. ಬಿತ್ತು
೧೭೪. ಬಿರಿ
೧೭೫. ಬೀಸು
೧೭೬. ಬೀಳು
೧೭೭. ಬೆದರು

೧೭೮. ಬೆರೆ
೧೭೯. ಬೆಳೆ
೧೮೦. ಬೇಯು
೧೮೧. ಬೇಸರು
೧೮೨. ಮಣಿ
೧೮೩. ಮರೆ
೧೮೪. ಮಿಗು
೧೮೫. ಮಿನು
೧೮೬. ಮಿಾ
೧೮೭. ಮುಂ
೧೮೮. ಮುಗಿ
೧೮೯. ಮುಚ್ಚು
೧೯೦. ಮುಡು
೧೯೧. ಮುತ್ತು
೧೯೨. ಮುನಿ
೧೯೩. ಮುರಿ
೧೯೪. ಮೂ, ಮೂರ್
೧೯೫. ಮೆಚ್ಚು
೧೯೬. ಮೆರೆ
೧೯೭. ಮೇ
೧೯೮. ಮೊಳೆ
೧೯೯. ರಾಟು
೨೦೦. ರಾವು
೨೦೧. ಲಾಗು

೨೦೨. ಸಲ್, ಸಲ್ಲ
೨೦೩. ಸವಿ
೨೦೪. ಸಾಗು
೨೦೫. ಸಾಲು
೩೦೬. ಸಿಗಿ
೨೦೭. ಸಿಡಿ
೨೦೮. ಸೀಪು
೨೦೯. ಸುಡು
೨೧೦. ಸುತ್ತು
೨೧೧. ಸುರಿ
೨೧೨. ಸುರುಳು
೨೧೩. ಸುಲಿ
೨೧೪. ಸುಳಿ
೨೧೫. ಸೆಳೆ
೨೧೬. ಸೋಗು
೨೧೭. ಸೋರು
೨೧೮. ಸೋಲು
೨೧೯. ಹಂಗಿಸು
೨೨೦. ಹಂಚು
೨೨೧. ಹತ್ತು
೨೨೨. ಹಬ್ಬು
೨೨೩. ಹರವು
೨೨೪. ಹರಿ
೨೨೫. ಹಸಿ

೨೨೬. ಹಾಯು
೨೨೭. ಹಾರು
೨೨೮. ಹಾಸು
೨೨೯. ಹಿಗ್ಗು
೨೩೦. ಹಿಂ, ಹಿನ್
೨೩೧. ಹಿಂಡು
೨೩೨. ಹಿಡಿ
೨೩೩. ಹಿರಿ
೨೩೪. ಹುಗಿ
೨೩೫. ಹುಟ್ಟು
೨೩೬. ಹುಸಿ
೨೩೭. ಹುಳು
೨೩೮. ಹೆಚ್ಚು
೨೩೯. ಹೆಣೆ
೨೪೦. ಹೆದರು
೨೪೧. ಹೆರು
೨೪೨. ಹೇರು
೨೪೩. ಹೇಸು
೨೪೪. ಹೋಗು
೨೪೫ ಹೊಡೆ
೨೪೬. ಹೊಡಿ
೨೪೭. ಹೊರಳು
೨೪೮. ಹೊರು
೨೪೯. ಹೊಳೆ

**ಅಕ್ಕರೆ** ಕ್ರಿ. (ಬಯಿಸು, ಪ್ರೀತಿ ಮಾಡು). ಅಕ್ಕರತೆ (ಪ್ರೀತಿ); ಅಕ್ಕರಿಕೆ; ಅಕ್ಕರಿಗ; ಅಕ್ಕರೆ (ಪ್ರೀತಿ)

**ಅಗಲು** ಕ್ರಿ. (ತೊಲಗು). ಅಗಲ; ಅಗಲಿಕೆ; ಅಗಲು; ಅಗಲುವಿಕೆ; ಅಡ್ಡಗಲು.

**ಅಗಳು** ಕ್ರಿ. (ಅಗಿ, ತೋಡು). ಅಗಳತಿ (ಖಂದಕ); ಅಗಳತೆ; ಅಗಳ್ತೆ; ಅಗಳಿ.

**ಅಗಿ** ಕ್ರಿ (ತೋಡು) ಅಗತ; ಅಗಿ (ಮೊಳಕೆ, ಸಸಿ)

**ಅಂಜು** ಕ್ರಿ. (ಬೆದರು) ಅಂಜಿಕೆ; ಅಂಜುಗುಳಿ; ಅಂಜುಬುರುಕ.

**ಅಟ್ಟು** ಕ್ರಿ (ಓಡಿಸು). ಅಟ್ಟುಳಿ (ಕಾಟ); ಅಟ್ಟಾಯ (ಅಟ್ಟು+ಆಯ, ಲಾಭ; ಶ್ರಮದ ಫಲ); ಅಟ್ಟಾಳು (ಅಟ್ಟು+ಆಳು; ಒಬ್ಬನ ಹಿಂದೆ ಓಡಿಸಿದ ಮತ್ತೊಬ್ಬ ಆಳು).

**ಅಂಟು** ಕ್ರಿ. (ಹತ್ತಿಕೊಳ್ಳು). ಅಂಟು; ಅಂಟುಗಳ (ತುದಿಗೆ ಜಿಗಿ ಹಚ್ಚಿದ ಗಳ); ಅಂಟುಗೋಲು; ಅಂಟುಮುರುವು; ಅಂಟಿಳೆ (ಎಳೆ=ನೂಲು; ಸರಿ ಹಚ್ಚಿದ ನೂಲು)

**ಅಡಕು** ಕ್ರಿ. (ಅಡಗು, ಮುಚ್ಚಿರು). ಅಡಕು; ಅಡಕಲ (ಧಾನ್ಯ ಮುಂತಾದ್ದನ್ನು ತುಂಬಿ ಒಂದರ ಮೇಲೊಂದು ಏರಿಸಿದ ಪಾತ್ರೆಗಳು); ಅಡಿಕೆ; ಅಡಕೊತ್ತು.

**ಅಡ್ಡು** ಕ್ರಿ. (ನಡುವೆ ಬರು) ಅಡ್ಡ; ಅಡ್ಡಣ (ಕಾಳಗದಲ್ಲಿ ಪೆಟ್ಟು ತಾಕಬಾರದೆಂದು ನಡುವೆ ತರುವ ಆಯುಧ, ಡಾಲು); ಅಡ್ಡಣಿ; ಅಡ್ಡಣಿಗೆ; ಅಡ್ಡಿ; ಅಡ್ಡಿಕೆ.

**ಅರಿ** ಕ್ರಿ. (ತಿಳಿ). ಅರಿಕೆ; ಅರಿಪು; ಅರಿವು; ಅರುಹು.

**ಅರೆ** ವಿ. (ಅರ್ಧ). ಅರಿವೆ (ಅರ್ಧ ಪಚನ, ಅಜೀರ್ಣ); ಅರೆಕೆ; ಅರೆಗಾವು (ಕಾವು—,); ಅರೆನೋಟ; ಅರೆವಾಸಿ (ಅರ್ಧ ಪಾಲು).

**ಅರೆ** ಕ್ರಿ. (ತಿಕ್ಕು). ಅರ; ಅರನ; ಅರ್ನ (ಪದಾರ್ಥಗಳನ್ನು ತಿಕ್ಕಿ ನುಣುಪು ಮಾಡುವದಕ್ಕಾಗಿ ಉಪಯೋಗಿಸುವ ಉಕ್ಕಿನ ಶಸ್ತ್ರ).

**ಅಲರು** ಕ್ರಿ. (ಅರಳು). ಅಲರು (ಹೂವು): ಅಲರಿಜ (ಇಜ=ಹುಟ್ಟಿದವ; ಬ್ರಹ್ಮ); ಅಲರುಣಿ (ಉಣಿ=ತಿನ್ನುವದು; ಗುಂಗೀ ಹುಳ); ಅಲರ್ವಕ್ಕೆ (ಪಕ್ಕೆ, ಹಕ್ಕಿ=ಪಕ್ಷಿ; ಗುಂಗೀ ಹುಳ); ಅಲರ್ಪೊಡೆಯ (ಪೊಡೆ=ಹೊಟ್ಟೆ; ಕಮಲನಾಭ, ವಿಷ್ಣು).

**ಅಳಿ** ಕ್ರಿ. (ಕೆಡು, ನಾಶವಾಗು). ಅಳಿಕು; ಅಳಿಪು; ಅಳಿವು; ಅಳುಪು; ಅಳ್ಗು.

**ಅಳೆ** ಕ್ರಿ. (ಪರಿಮಾಣ ಮಾಡು). ಅಳತೆ; ಅಳವು; ಅಳದುಣಿಗ (ಅಳದು+ಉಣಿಗ; ಅಳತೆಯಿಂದ ಉಣ್ಣುವವ, ಕೃಪಣ, ಜೀನ); ಅಳವುಗೋಲು.

**ಆಡು** ಕ್ರಿ. (ಕ್ರೀಡಿಸು). ಆಟ; ಆಟಿಗೆ; ಆಡು; ಆಟಗುಳಿ (ಯಾವಾಗಲೂ ಆಟಕ್ಕೆ ಮೆಚ್ಚಿದವ); ಆಟಿಡಪು (ಇಡಪು=ವೇಳೆ; ಆಟದ ದಿವಸ).

**ಆನು** ಕ್ರಿ. (ಹೊಂದು). ಆನಿಕೆ; ಆನೆ; ಆಂದಿ (ಹೊಣೆ); ಆಂದಿಗ (ಹೊಣೆಗಾರ); ಆಂದುಗಲ್ಲು (ಒಜ್ಜೇ ಹೊತ್ತುಕೊಂಡು ಹೋಗುವ ದಾರಿಕಾರರು ದಾರಿಲಿ ಹೋಗುವಾಗ ದಣಿದರೆ, ಅವರು ಒಜ್ಜೆ ಇಳಿಸುವದಕ್ಕಾಗಿ ನಿಲ್ಲಿಸಿದ ಕಲ್ಲು).

**ಆರ್** ವಿ. (ಆರು). ಆರಡಿ (ಅಡಿ=ಕಾಲು; ಆರ ಕಾಲಿನ ಪ್ರಾಣಿ, ಗುಂಗೀ ಹುಳ); ಆರ್ಬರು (ಆರು ಮಂದಿ); ಆರ್ಮೊಗ (ಮೊಗ=ಮುಖ; ಆರು ಮುಖದವ, ಕಾರ್ತಿಕಸ್ವಾಮಿ).

ಆರು ಕ್ರಿ. (ತಣ್ಣಗಾಗು). ಆರಿಕೆ; ಬಾಯಾರಿಕೆ (ಬಾಯ್+ಆರಿಕೆ; ನೀರಡಿಕೆ).

ಆಳು ಕ್ರಿ. (ಅಧಿಕಾರ ಮಾಡು, ಸಮರ್ಥನಾಗು). ಆಳಿಕೆ; ಆಳ್ವಿಕೆ; ಆಳು (ಮನುಷ್ಯ, ಸೇವಕ); ಆಳುತನ; ಆಳ್ಮೆ; ಆಳುಂಬ (ಆಳ್+ಉಂಬ; ಮನುಷ್ಯನ ತಿನ್ನುವವ); ಆಳ್ಬಲ (ಆಳ್+ಬಲ; ಕಾಲಾಳ ದಂಡು); ಆಳ್ವೊತ್ತೆ (ಹೊಣೆ).

ಇಡಿಯು ಕ್ರಿ. (ಗುಂಪಾಗು, ಕೂಡಿ ಬರು). ಇಡಿ (ಸಂಪೂರ್ಣ); ಇಡಿಕು (ದಟ್ಟಣೀ ಸ್ಥಳ); ಇಡುಕು (ಇರಕು).

ಇಡು ಕ್ರಿ. (ಇರಿಸು). ಇಡಕು (ಸಂಕೋಚ ದಟ್ಟಣೆ); ಇಡುಕು; ಇಡುದಿ (ದಾರಿಕಾರರು ಇಳಿಯುವ ಸ್ಥಳ); ಇಡೆ [ಎಡೆ=ಸ್ಥಳ].

ಇನ್ ವಿ. (ಸವಿ). ಇಂಪು; ಇಂಬು; ಇಂಗಡಲು (ಕಡಲು=ಸಮುದ್ರ; ಸವಿಯಾದ ಸಮುದ್ರ, ಕ್ಷೀರಸಮುದ್ರ); ಇಂಗದಿರ (ಕದಿರ=ಕಿರಣ; ಸುಖಕರ ಕಿರಣದವ, ಚಂದ್ರ); ಇಂಗೋಲು (ಕಬ್ಬು).

ಇರ್ ವಿ. (ಎರಡು). ಇಕ್ಕಟ್ಟು (ಇರ್+ಕಟ್ಟು); ಇಕ್ಕೆಲ (ಇರ್+ಕೆಲ=ಪಾರ್ಶ್ವ, ಕಡೆ); ಇತ್ತಡ (ಇರ್+ತಡ, ಘಡ, ತೀರ); ಇತ್ತಂಡ (ಇರ್+ತಂಡ); ಇಪ್ಪತ್ತು (ಇರ್+ಪತ್ತು, ಹತ್ತು); ಇಮ್ಮಡಿ (ಇರ್+ಮಡಿ; ಎರಡು ಪಾಲು); ಇರ್ಮೆ (ಇರ್+ಮೆ; ಎರಡು ಸಾರಿ).

ಇರಿ ಕ್ರಿ. (ತಿವಿ). ಇರಿತ; ಇರುಕು; ಇರುಕುಳ (ಇರಿಯುವ ದನ); ಇರುಕುಳಿ.

ಇರು ಕ್ರಿ. (ಬಾಳು). ಇರವು; ಇರಿವು; ಇರುವಿಕೆ.

ಇಳಿ ಕ್ರಿ. (ಕೆಳಗೆ ಬರು). ಇಳಿತ; ಇಳವು; ಇಳಿಕೆ; ಇಳುವು.

ಈಯು ಕ್ರಿ. (ಕೊಡು). ಈತ; ಈನ; ಈಯ್ಯಲು; ಈವಿಕೆ.

ಉಕ್ಕು ಕ್ರಿ. (ಮೀರು, ಹೊರಚೆಲ್ಲು). ಉಕ್ಕಡ; ಉಕ್ಕಡಿ (ಮಿಗಿಲು); ಉಕ್ಕರಿ (ಗರ್ವ); ಉಕ್ಕಲು; ಉಕ್ಕು (ಗರ್ವ).

ಉಗಿ ಕ್ರಿ. (ಚುಚ್ಚು, ತೂತು ಕೆಡಹು); ಉಗಿರು; ಉಗುರು; ಉಗುಲು (ಕೊರೆದು ಮಾಡಿದ ತೂತು).

ಉಡು ಕ್ರಿ. (ಬಟ್ಟೆಯ ಸುತ್ತಿಕೊಳ್ಳು). ಉಡಿ; ಉಡಿಕೆ (ಬರೆ ಬಟ್ಟೆಯನ್ನು ಕೊಟ್ಟು, ಇತರ ಯಾವ ಸಮಾರಂಭ ಮಾಡದೆ ಆದ ಲಗ್ನ); ಉಡಿಗೆ; ಉಡುಗರೆ; ಉಡುದಾರ.

ಉಣ್ಣು ಕ್ರಿ. (ತಿನ್ನು). ಉಣಿ (ತಿನ್ನುವವ); ಊಟ; ಉಂಡೋಡಿಗ (ಉಂಡ ಕೂಡ್ಲೆ ಹೊರಗೆ ಹೋಗುವವ); ಉಂಬಳಿ (ಉಂಬುವ ಹಳ್ಳಿ, ಇನಾಮುಗ್ರಾಮ); ಉಂಬಳಿಗಾರ.

ಉಬ್ಬು ಕ್ರಿ. (ಘನವಾಗು, ಹಿಗ್ಗು). ಉಬ್ಬಟೆ; ಉಬ್ಬಣ; ಉಬ್ಬರ (ಹೆಚ್ಚು); ಉಬ್ಬರಣೆ; ಉಬ್ಬಸ.

ಉರಿ ಕ್ರಿ. (ಸುಡು). ಉರಿ; ಉರಿವು; ಉರುಪು; ಉರುಬೆ (ನೋವು); ಉರುವಣಿ; ಉರುವಣಿಗೆ; ಉರುವಣೆ; ಉಪ್ಪುರ್ [ಉಪ್ಪು].

ಉಲಿಯು ಕ್ರಿ. (ಕೂಗು, ಮಾತಾಡು). ಉಲಿಗು; ಉಲಿವು; ಉಲುಪು; ಉಲುವ್ರು; ಉಲುಹು.

ಉಳಿ ಕ್ರಿ. ಉಳಿಕೆ; ಉಳಿತ; ಉಳಿವು; ಉಳಿತಾಯ (ಲಾಭ); ಉಳುಪಡಿ (ಶಿಲಕು); ಉಳುಮೆ.

ಊರು ಕ್ರಿ. (ನೆಲೆಗೊಳಿಸು). ಊರಿಕೆ; ಊರು (ಗ್ರಾಮ, ಹಳ್ಳಿ).

ಎಗ್ಗು ಕ್ರಿ. (ಕುಕ್ಕು). ಎಗ್ಗ (ಯಾವಾಗಲು ತಲೇ ಮೇಲೆ ಕುಕ್ಕಿಸಿಕೊಳ್ಳುವವ, ತಿಳಿಗೇಡಿ); ಎಗ್ಗು (ನಾಚಿಕೆ, ಅಪಮಾನ); ಎಗ್ಗುಳಿ (ಎಗ್ಗು+ಗುಳಿ; ಮಾನಗೇಡಿ).

**ಎಣ್** ಎ. (ಎಂಟು). ಎಣ್ದೆಸೆ (ದೆಸೆ=ದಿಕ್ಕು); ಎಣ್ಬರು (ಎಂಟು ಮಂದಿ); ಎಣ್ಭುಜ (ಭುಜ=ತೋಳು; ಎಂಟು ತೋಳಿನವ, ವಿಷ್ಣು); ಎಣ್ಮೈಯುವ (ಮೈಯುವ=ಶರೀರದವ; ಎಂಟು ಶರೀರಗಳುಳ್ಳವ, ಶಿವ).

**ಎದೆ** ನಾ. (ಹೃದಯ). ಎದೆ (ಧೈರ್ಯ); ಎದೆಗಾರ; ಎದೆಗುದಿ; ಎದೆವೊಡಕ (ಅಂಜುಬುರುಕ); ಎದೆಗುಂಡು.

**ಎಡರು** ಕ್ರಿ. (ಎಡವು). ಎಡಚು (ವಿಘ್ನ); ಎಡರು; ಎಡವು; ಎಡರಾಳು (ಶತ್ರು); ಎಡಗೇಡಿ (ಅಡ್ಡಿಯನ್ನು ದೂರ ಮಾಡುವವ, ಗಣೇಶ).

**ಎಣಿಸು** ಕ್ರಿ. (ಲೆಕ್ಕಿಸು). ಎಣಿಕೆ (ಲೆಕ್ಕ, ಯೋಗ್ಯತೆ); ಎಣೆ; ಎಣೆಯ (ಗೆಳೆಯ); ಎಣೆಗಾರ.

**ಎರಲ್, ಎಲರ್** ನಾ. (ಗಾಳಿ). ಎಲರುಣಿ (ಎಲರ್+ಉಣಿ; ಗಾಳಿಯನ್ನು ಉಣ್ಣುವದು, ಹಾವು); ಎಲರುಣಿಪಗೆಯ (ಎಲರುಣಿ=ಸರ್ಪ; ಪಗೆಯ=ವೈರಿ; ಹಾವಿನ ವೈರಿ, ಗರುಡ); ಎಲರುಣಿವೆದೆಯ (ವೆದೆ=ಹೆದೆ; ಸರ್ಪದ ಹೆದೆಯ ಮಾಡಿಕೊಂಡವ, ಶಿವ); ಎಲವಟ್ಟೆ (ಗಾಳಿಯ ಮಾರ್ಗ, ಆಕಾಶ)

**ಎಸೆ** ಕ್ರಿ. (ಒಗೆ, ಹೊರಚಲ್ಲು). ಎಸಳು; ಎಸಿಗೆ (ಅಲಗು ಹೊಡೆಯೋಣ); ಎಸೆ; ಎಸೆಗಾರ (ಬಿಲ್ಲಿನಿಂದ ಅಲಗು ಹೊಡೆಯುವವ).

**ಎಳೆ** ಕ್ರಿ. (ಜಗ್ಗು). ಎಳತ; ಎಳವು; ಎಳೆ (ನೂಲು); ಎಳ್ಚು [ಎಣ್ಚು].

**ಏರು** ಕ್ರಿ. (ಮೇಲೆ ಹೋಗು). ಏರಿ; ಏರಿಕೆ; ಏರಾಟ (ಏರು+ಆಟ; ಆನೆ ಕುದುರೆ ಮುಂತಾದವುಗಳನ್ನು ಹತ್ತುವ ವಿದ್ಯೆ); ಏರಾಳಿ.

**ಏಳು** ಕ್ರಿ. (ಮೇಲೆ ಬರು, ಮೂಡು). ಏಣು (ಎದ್ದು ಕಾಣಿಸುವ ಭಾಗ, ತುದಿ); ಏಳಿಗೆ; ಏಳ್ಗೆ; ಏಳ್ಚರ [ಎಚ್ಚರ]; ಎಚ್ಚರಿಕೆ.

ಐ ವಿ. (ಐದು). ಐಮೊಗ (ಮೊಗ=ಮುಖ; ಐದು ಮುಖಗಳುಳ್ಳವ, ಶಿವ); ಐವರು (ಐದು ಮಂದಿ); ಐಶರ (ಶರ=ಬಾಣ; ಐದು ಬಾಣಗಳುಳ್ಳವ, ಮದನ).

ಒಂಕು ಕ್ರಿ. (ಡೊಂಕಾಗು) ಒಂಕರ (ಡೊಂಕು); ಒಂಕಿ (ಹೆಂಗಸರು ಕೈಯಲ್ಲಿಡುವ ಒಂದು ಆಭರಣ); ಒಂಕಿಣಿ (ಕಿರಿಗತ್ತಿ).

ಒಕ್ಕು ಕ್ರಿ. (ಕೂಡಿಸಿ, ಹೆಚ್ಚಾಗು). ಒಕ್ಕಲ; ಒಕ್ಕಲು, ಒಕ್ಕಲಿಗ (ಕಾಳು ಬೆಳಿಸುವವ, ಕೂಡಿಸುವವ); ಒಕ್ಕಲತನ; ಒಕ್ಕಲ ಮಗ.

ಒಟ್ಟು ಕ್ರಿ. (ಕೂಡಿ ಹಾಕು) ಒಟ್ಟಲ (ಗುಂಪು); ಒಟ್ಟಿಕೆ; ಒಟ್ಟಿಗೆ; ಒಟ್ಟು.

ಒಡೆ ಕ್ರಿ. (ಭಾಗಿಸು, ಚೂರು ಮಾಡು). ಒಡಕ; ಒಡಕು; ಒಡಪು.

ಒಡ್ಡು ಕ್ರಿ. (ಹರಹು, ಪಸರಿಸು) ಒಡ್ಡಣ; ಒಡ್ಡಿಕೆ; ಒಡ್ಡು (ಬಾಂದು).

ಒತ್ತು ಕ್ರಿ. (ಹಿಚಕು, ಹಿಂಡು) ಒತ್ತರ (ವೇಗ); ಒತ್ತಂಬ (ಬಲಾತ್ಕಾರ); ಒತ್ತು (೧ ಒಂದು ವ್ಯಂಜನಕ್ಕೆ ಅದೇ ವ್ಯಂಜನ ಕೂಡಿಸೋಣ ೨ ಹೊಳೆಯ ನೀರಿನ ವೇಗಕ್ಕೆ ದಂಡೆಯಲ್ಲಿ ಬಿದ್ದ ಕೊರಕಲ); ಒತ್ತೆ; ಒತ್ತಾಸೆ (ಸಹಾಯ); ಒತ್ತಾಳು.

ಒಪ್ಪು ಕ್ರಿ. (ಸಲ್ಲು, ಚಂದಗಾಣು). ಒಪ್ಪ (ನುಣುಪು); ಒಪ್ಪಂದ (ಶೋಭೆ, ಸಲ್ಲಿಕೆ); ಒಪ್ಪರ (ಒಪ್ಪುವ); ಒಪ್ಪು (ಶೋಭೆ).

ಒರ್, ಓರ್ ವಿ. (ಒಂದು). ಒಕ್ಕಟ್ಟು (ಒರ್+ಕಟ್ಟು; ಐಕ್ಯ); ಒಕ್ಕಣ್ಣು; ಒಗ್ಗಾಲೆ; ಒತ್ತಟ್ಟು; ಒಪ್ಪೊತ್ತು (ಒರ್+ಪೊತ್ತು, ಹೊತ್ತು; ಒಂದು ವೇಳೆ); ಒಬ್ಬ (ಒರ್+ವ); ಒಮ್ಮೆ (ಒರ್+ಮೆ; ಒಂದು ಸಾರಿ); ಓರ್ಜಂತ (ಓರ್+ಜಂತ, ದಂತ, ಹಲ್ಲು; ಏಕದಂತ, ಗಣಪತಿ); ಓರ್ವ (ಓರ್+ವ; ಒಬ್ಬವ).

ಒರೆ ಕ್ರಿ. (ತಿಕ್ಕು, ಮಸೆ) ಒರಳು; ಒರೆತ; ಒರೆಗಲ್ಲು (ಬಂಗಾರವನ್ನು ತಿಕ್ಕಿ ನೋಡುವ ಕಲ್ಲು).

**ಒಲಿ** ಕ್ರಿ. (ಮೆಚ್ಚು). ಒಲವು; ಒಲಿಪು; ಒಲುಮೆ; ಒಲ್ಮೆ.

**ಓ** ಕ್ರಿ. (ಗೆಳೆತನ ಮಾಡು). ಓಪನು (ಗೆಳೆಯನು); ಓಪಳು (ಗೆಳತಿ); ಓಪಾದಿ (ಗೆಳೆತನ, ಸಾಮ್ಯ); ಓಪು (ಗೆಳೆತನ).

**ಓಡು** ಕ್ರಿ. (ಬೇಗ ಹೋಗು). ಓಟ; ಓಡಿಕೆ; ಓಡಿಗೆ; ಓಡು; ಓಡುಗುಳಿ (ಅಂಜುಬುರುಕ).

**ಓದು** ಕ್ರಿ. (ವಾಚಿಸು) ಓದು; ಓದುಕುಳಿ (ಯಾವಾಗಲು ಓದುವವ).

**ಕಟ್ಟು** ಕ್ರಿ. (ಬಿಗಿದು ಹಾಕು). ಕಟ್ಟಳೆ (ನಿಯಮ); ಕಟ್ಟು; ಕಟ್ಟೆ; ಕಟ್ಟಾಳು (ಕಟ್ಟಿದ ಆಳು, ದಾಸ); ಕಟ್ಲೆ.

**ಕಡಿ** ಕ್ರಿ. (ಕಚ್ಚು, ತುಂಡು ಮಾಡು) ಕಡತ; ಕಡಿ; ಕಡಿಕು (ತಲೆಯಿಲ್ಲದ ಹೆಣ); ಕಡಿಮೆ (ತುಂಡು, ಅರ್ಥಾತ್ ಊನ ಮಾಡೋಣ, ಕೊರತೆ), ಕಡಿವಾಣ (ಲಗಾಮು); ಕತ್ತಿ (ಕಡಿಯುವ ಶಸ್ತ್ರ); ಕಡ್ಡಿ?

**ಕನಲು** ಕ್ರಿ. (ಸಿಟ್ಟಾಗು). ಕನಲು; ಕನಲಿಕೆ; ಕನಲ್ಕು; ಕನಲ್ಕೆ.

**ಕರ್, ಕಾರ್** ವಿ. (ಕರಿದು). ಕರಿ; ಕರ್ತಲೆ [ಕತ್ತಲೆ]; ಕರ್ಪು [ಕಪ್ಪು]; ಕಾರು [ಕಾಳು]; ಕರ್ನಾಡು (ನಾಡು=ದೇಶ); ಕರ್ನೆಲ; ಕರ್ಮುಡು (ಯಮುನಾ ನದಿ); ಕಾರ್ಗಾಲ (ಮಳೆಗಾಲ); ಕಾರ್ಗತ್ತಲು (ಬಹಳ ಕತ್ತಲೆ): ಕಾರ್ಬಟ್ಟೆ (ಬಟ್ಟೆ=ಮಾರ್ಗ; ಕರಿಮಾರ್ಗದ, ಬೆಂಕಿ, ಬೆಂಕಿ ಹತ್ತಿ ಸುಡುತ್ತಾ ಹೋದತ್ತೆಲ್ಲ ದಾರಿ ಕಪ್ಪಾಗುತ್ತದೆ ಎಂಬುದು ಎಲ್ಲರಿಗೂ ಗೊತ್ತಿದ್ದ ಮಾತು); ಕಾರ್ಮುಗಿಲು; ಕಾರ್ಮೋಡ.

**ಕರಿ** ಕ್ರಿ. (ಹುರಿ). ಕರಕು; ಕರಗಡವು.

**ಕರೆ** ಕ್ರಿ. (ಆಮಂತ್ರಣ ಮಾಡು). ಕರವು; ಕರಹು; ಕರೆವಣ.

**ಕಲ್** ನಾ. (ಕಲ್ಲು). ಕಲ್ಕುಟಿಗ; ಕಲ್ಮಳೆ; ಕಲ್ಮುಡಿ (ಮುಡಿ=ತಲೆ; ದಡ್ಡ); ಕಲ್ಲಾಯ್ತ (ಕಲ್ಲುಕುಟ್ಟಿಗ); ಆಣೆಕಲ್ಲು.

**ಕಲಿ** ಕ್ರಿ. (ಅಭ್ಯಾಸ ಮಾಡು). ಕಲಿಕೆ; ಕಲಿಯುವಿಕೆ; ಕಲಿವು.

**ಕಲಿ** ಕ್ರಿ. (ಬೆರೆ, ಕೂಡು). ಕಲಕ; ಕಲಪ (ಮೈಗೆ ಹಚ್ಚಿ ಕೊಳ್ಳುವದಕ್ಕಾಗಿ ಮಾಡಿದ ಸುಗಂಧದ್ರವ್ಯ); ಕಲಪು (ಕಸಕಡ್ಡಿ); ಕಲಿಪು; ಕಲೆಗಲುಪು (ಋಣಾನುಬಂಧ).

**ಕಳ್, ಕಳೆ** ಕ್ರಿ. (ಕದಿಯು). ಕಳವು; ಕಳ್ಳ; ಕಳ್ಳತನ; ಮೈಗಳ್ಳ.

**ಕಾಡು** ಕ್ರಿ. (ಪೀಡಿಸು). ಕಾಟ; ಕಾಟಕ (ಸುಲಿಗೆಗಾರ); ಕಾಟು (ಗಡತ, ದಂಶ); ಕಾಡ; ಕಾಡು (ಹಳವು).

**ಕಾಣ್, ಕಾಣು** ಕ್ರಿ. (ತೋರು). ಕಣ್ಣು; ಕಾಣಿಕೆ; ಕಂಗಳ (ಕುರುಡ); ಕಂಬನಿ (ಕಣ್+ಹನಿ, ಬನಿ; ಕಣ್ಣೀರು); ಕಣ್ಮಾಯ (ಕಣ್+ಮಾಯು; ಕಣ್ಣುಕಟ್ಟು).

**ಕಾದು** ಕ್ರಿ. (ಕಾಳಗ ಮಾಡು). ಕಾದಿಕೆ (ಕಾಳಗ, ಜಗಳ); ಕಾದುಗು (ಜಗಳ ಮಾಡುವವ); ಕದನ.

**ಕಾಯು** ಕ್ರಿ. (ರಕ್ಷಿಸು). ಕಾಪುಡ; ಕಾವಲಿ; ಕಾವಲು; ಕಾವಿಲು; ಕಾವಿಲಗಾರ; ಮೈಗಾವಲಿ (ಆತ್ಮಸಂರಕ್ಷಣಕ್ಕಾಗಿ ಇಟ್ಟ ಜನ).

**ಕಾಯು** ಕ್ರಿ. (ಬಿಸಿಯಾಗು). ಕಾಯ್ಪು [ಕಾವು]; ಕಾವರ (ಹೆಮ್ಮೆ); ಕಾವರೆ (ತ್ವರೆ, ವೇಗ); ಕಾವಳಿ (ಕಾವಿಗೆ, ಅರ್ಥಾತ್ ಪಿತ್ತದಿಂದ, ಹುಟ್ಟುವ ರೋಗವಿಶೇಷ); ಕಾವು.

**ಕಾಲ್** ನಾ. (ಕಾಲು). ಕಾಲಟ್ಟ; ಕಾಲಾಳು (ಆಳು=ಮನುಷ್ಯ; ಪದಾತಿ); ಕಾಲುರಿಚ (ಕಾಲುರಿ+ಇಚ; ಮನೆ ಮನೆ ತಿರುಕೊಳ್ಳುವವ); ಕಾಲ್ಕುಪ್ಪಸ (ಚಲ್ಲಣ); ಕಾಲ್ಗಡಗ; ಕಾಲ್ಮೇಲು (ಕಾಲು ಮೇಲೆ ತಲೆ ಕೆಳಗೆ, ತಿರುವುಮುರುವು).

**ಕಿರಿ** ಕ್ರಿ. (ಸಣ್ಣದಾಗು). ಕಿರಿ; ಕಿರಿಗೆ; ಕಿರಿಯು; ಕಿರಿಯತನ; ಕಿರೇತನ.

**ಕುಗ್ಗು** ಕ್ರಿ. (ಕಡಿಮೆಯಾಗು). ಕುಗ್ಗಟ (ಇಳಿದು ಹೋದ, ದೀನ); ಕುಗ್ಗಾಲ (ಕೆಡಕ ಕಾಲ); ಕುಗ್ಗೋಲು.

**ಕುಂಟು** ಕ್ರಿ. (ಕಾಲು ಎಳೆಯುತ್ತಾ, ಇಲ್ಲವೆ ಒಂದು ಕಾಲಿಲಿ ನಡೆ). ಕುಂಟ; ಕುಂಟತನ; ಕುಂಟಿಗೆ; ಕುಂಟಿ.

**ಕುರು** ಕ್ರಿ. (ಗುರ್ತು ಮಾಡು). ಕುರುಡ (ಗುರ್ತನರಿಯದ, ಕಂಗಳಿ); ಕುರುಡು; ಕುರುಪಡಿ; ಕುರುಪು (ಗುರ್ತು); ಕುರುಹು.

**ಕುಳಿರ್** ವಿ. (ತಂಪು). ಕುಳಿರು (ಚಳಿ); ಕುಳಿರ್ಗಾಳಿ (ತಂಪು ಗಾಳಿ); ಕುಳಿರ್ವನೆ (ವನೆ=ಮನೆ; ತಂಪು ಮನೆ); ಕುಳಿರ್ವೆಟ್ಟ (ಬೆಟ್ಟ=ಗುಡ್ಡ; ಹಿಮಾಲಯ).

**ಕೂಗು** ಕ್ರಿ. (ಘಟ್ಟಿ ಒದರು). ಕೂಗು; ಕೂಗಣಿ; ಕೂಗಳತೆ (ಕೂಗು+ಅಳತೆ; ಘಟ್ಟಿಯಾಗಿ ಒದರಿದ್ದು ಕೇಳಬರುವಷ್ಟು ಅಂತರ).

**ಕೂಡು** ಕ್ರಿ. (ಗುಂಪಾಗು). ಕೂಟ; ಕೂಡಿಕೆ (ಸಮಾಜ); ಕೂಡ; ಕೂಡಲೆ (ಆಗಲೆ).

**ಕೂರು** ಕ್ರಿ. (ಸ್ನೇಹಿಸು, ಪ್ರೀತಿ ಮಾಡು); ಕೂರ್ಪು (ಪ್ರೀತಿ); ಕೂರ್ಮೆ; ಕೂರ್ಮೆ; ಕೂರ್ಪಾಳಿ (ಗೆಳೆಯ).

**ಕೆಂ** ವಿ. (ಕೆಂಪು). ಕೆಂಪು; ಕೆಂಗದಿರ (ಕದಿರ=ಕಿರಣ; ಸೂರ್ಯ); ಕೆಂಗಿಡಿ (ಕೆಂಪು ಕಿಡಿಯುಳ್ಳದ್ದು, ಬೆಂಕಿ); ಕೆಂದಾವರೆ (ತಾವರೆ=ಕಮಲ; ಕೆಂಪು ಕಮಲ); ಕೆಂನೀರು (ಕೆಂಪು ನೀರು, ಅಂದರೇನು, ರಕ್ತ); ಕೆಂಬರಲು (ಪರಲು=ಕಲ್ಲು; ಮಾಣಿಕ್ಯರತ್ನ).

**ಕೆಡು** ಕ್ರಿ. (ಹಾನಿಯಾಗು). ಕೆಟ್ಟ; ಕೆಡಕ; ಕೆಡಕು; ಕೆಡಕುತನ; ಕೇಡಿ; ಕೇಡು; ಕುಲಗೇಡಿ (ಕುಲ=ಜಾತಿ; ತನ್ನ ಮೂಲ ಕುಲ ಬಿಟ್ಟು ಎರಡನೆ ಕುಲಕ್ಕೆ ಸೇರಿದವ); ತಿಳಿಗೇಡಿ (ಜ್ಞಾನವಿಲ್ಲದವ); ಮಾನಗೇಡಿ (ಪೊಡ್ಡಸ್ತಿಕೆಯಿಲ್ಲದವ).

ಕೆತ್ತು ಕ್ರಿ. (ಕಡಿ, ಏಳ್ಗೆಕೀ ಮಾಡು). ಕೆತ್ತಿಕೆ; ಕೆತ್ತಿಗೆ; ಕೆತ್ತೆ (ತುಣುಕು).

ಕೇಗು ಕ್ರಿ. (ಆನಂದದಿಂದ ಕೂಗು). ಕೇಕಿ (ನವಿಲು); ಕೇಕೆ (ನವಿಲ ಧ್ವನಿ); ಕೇಗು.

ಕೇಳು ಕ್ರಿ. (ವಿಚಾರಿಸು). ಕೇಳಿಕೆ; ಕೇಳಿವೆ.

ಕೈ ಕ್ರಿ. (ಮಾಡು). ಕೈ (ಮಾಡುವ ಸಾಧನ, ಹಸ್ತ); ಕೈಗಾರ; ಕೈಗಾರಿಕೆ; ಕೈದು (ಶಸ್ತ್ರ); ಕೈಯಾಳು; ಕೈದುಡಿತ; ಕೈತಿಂಡಿ; ಕೈಮುಟ್ಟ; ಕೈಸನ್ನೆ.

ಕೊಂಕು ಕ್ರಿ. (ಡೊಂಕಾಗು). ಕೊಂಕಿ; ಕೊಂಕು; ಕೊಂಕುಳು.

ಕೊಂಡಾಡು ಕ್ರಿ. (ಸ್ತುವಿಸು). ಕೊಂಡಾಟ; ಕೊಂಡಾಡಿಗ (ಸ್ತುವಿಸುವವ).

ಕೊಬ್ಬು ಕ್ರಿ. (ಸೊಕ್ಕೇರು). ಕೊಬ್ಬು (ಸೊಕ್ಕು); ಕೊಬ್ಬುಳಿ (ಸೊಕ್ಕಿನವ).

ಕೊಯು ಕ್ರಿ. (ಕಡಿ, ಕೊರೆ). ಕೊಯಿಕೆ; ಕೊಯಿಗೆ; ಕೊಯಿತ; ಕೊಯಿಲ.

ಕೊಲ್, ಕೊಲ್ಲು ಕ್ರಿ. (ಜೀವ ತೆಕ್ಕೊಳ್ಳು); ಕೊಲ; ಕೊಲೆ; ಕೊಲೆಗಡತ; ಕೊಲ್ಲಟಿಗ (ಕೊಲ್ಲುವವ).

ಗಳಿಸು ಕ್ರಿ. (ಸಂಪಾದಿಸು). ಗಳಿಕೆ; ಗಳಿಸುವಿಕೆ; ಗಳಿಕೆಗಾರ.

ಗುದ್ದು ಕ್ರಿ. (ಹೊಡೆ, ತೋಡು). ಗುದ್ದಲಿ; ಗುದ್ದಿಕೆ; ಗುದ್ದಿಲಿ; ಗುದ್ದು; ಗುದ್ದಾಟ; ಗುದ್ದುಮುರುಗೆ.

ಗುರುಕು ಕ್ರಿ. (ಗುರುಗಟ್ಟು). ಗುರಕೆ; ಗುರಿಕೆ; ಗುರುಕು.

ಗೆಲ್, ಗೆಲ್ಲು ಕ್ರಿ. (ಜಯಿಸು). ಗೆಲವು; ಗೆಲಿ; ಗೆಲುವು; ಗೆಲುವಾಟ.

**ಚೆಂ, ಚನ್** ವಿ. (ಕೆಂಪು). ಚೆಂಗದಿರ (ಗದಿರ, ಕದಿರ=ಕಿರಣ; ಸೂರ್ಯ); ಚೆಂದಳಿರು (ತಳಿರು=ಚಿಗುರು), ಚೆಂದುಟಿ (ತುಟಿ; ಕೆಂಪು ತುಟಿ); ಚೆಂನ್ನೈದಿಲೆ (ನೈದಿಲೆ=ಕಮಲ; ಕೆಂಪು ಕಮಲ).

**ಚಲ್ಲು** ಕ್ರಿ. (ಒಗೆ, ಹರವು) ಚಲ್ಲಿ (ಪ್ರತಿಬಿಂಬವನ್ನು ಒಗೆಯುವದು, ಕನ್ನಡಿ); ಚಲ್ಲೆ (ಅಗಲ, ದೊಡ್ಡ); ಚಲ್ಲಾಟ; ಚಲ್ಲಾಪಲ್ಲ; ಚಲ್ಲಾಪಿಲ್ಲಿ.

**ಚಿಗಿ** ಕ್ರಿ. (ಹೊಸ ಎಲೆಯಾಗು). ಚಿಗತ; ಚಿಗರು; ಚಿಗುರು; ಚಿಗುರಿ(?).

**ಜಗಡು** ಕ್ರಿ. (ಹೊಡೆದಾಡು) ಜಗಡ; ಜಗಳ; ಜಗಳಗಂಟ; ಜಗಳಾಟ.

**ಜಡಿ** ಕ್ರಿ. (ಹೊಡೆ) ಜಡತ; ಜಡಿ.

**ಜರೆ** ಕ್ರಿ. (ಜಾರು). ಜರಡಿ; ಜರಿಡಿ (ಸಾಣಿಗೆ); ಜರಿತ; ಜರಿಪು.

**ಜರೆ** ಕ್ರಿ. (ನಿಂದಿಸು) ಜರುಪು (ನಿಂದೆ); ಜರುಹು

**ಜಾರು** ಕ್ರಿ. (ಓಡು). ಜಾರಿಕೆ; ಜಾರಿಗೆ; ಜಾರುಗುಳಿ (ಓಡಿಹೋಗುವವ).

**ಜೀರು** ಕ್ರಿ. (ಚಿಮ್ಮು). ಜೀರ್ಕಳೆ [ಜೀಕಳೆ]; ಜೀರ್ಕೊಳವೆ (ನೀರು ಚಿಮ್ಮುವ ಕೊಳವೆ); ಜೀರ್ಗೊಳವೆ.

**ಜೋಲ್** ಕ್ರಿ. (ಜೋತಾಡು) ಜೊಲ್ಲು; ಜೋಲಿ; ಜೋಲು; ಜೋಳಿಗೆ.

**ತೆಗಲು** ಕ್ರಿ. (ಹೊಡಕು). ತಗಲ; ತಗಲು (ಸುಳ್ಳು): ತಗುಲು; ತಗುಲುಗಾರ.

**ತಡೆ** ಕ್ರಿ. (ತರುಬು). ತಡ (ಅವಕಾಶ); ತಡಪು; ತಡವು.

**ತಣಿ** ಕ್ರಿ. (ತೃಪ್ತಿಬಡು). ತಣಿಪು; ತಣಿವು.

**ತಂ, ತಂಪ್** ವಿ. (ತಂಪು). ತಂಪು (ತಂ+ಪು); ತಂಗದಿರ್ (ಗದಿರ್, ಕದಿರ್=ಕಿರಣ; ಚಂದ್ರ); ತಂಗಾಳಿ; ತಣ್ಣೆಳಲು (ತಂಪು ನೆಳಲು); ತಂಬಿಟ್ಟು.

**ತಲಪು** ಕ್ರಿ. (ಮುಟ್ಟು) ತಲಪು (ಸಂಬಳ); ತಲುಪು; ತಲುಬು; ತಲಬುಗಾರ (ಸಂಬಳದ ಆಳು).

**ತಳಿ** ಕ್ರಿ. (ಚಿಗು). ತಳಿರ್; ತಳಿರು; ತಳಿಲು; ತಳ್ತಿ [ತತ್ತಿ].

**ತಳ್ಳು** ಕ್ರಿ. (ನೂಕು). ತಳ್ಳಿ (ಬಂಡು); ತಳ್ಳುವಿಕೆ; ತಳ್ಳಿಗಾರ.

**ತಾಳು** ಕ್ರಿ. (ಸೈರಿಸು). ತಾಳಿಕೆ; ತಾಳುವಿಕೆ; ತಾಳ್ಮೆ.

**ತಿದ್ದು** ಕ್ರಿ. (ಸುಧಾರಿಸು). ತಿದ್ದುಪಾಟ; ತಿದ್ದುವಿಕೆ.

**ತಿನ್, ತಿನ್ನು** ಕ್ರಿ. (ಭಕ್ಷಿಸು). ತಿನಸು; ತಿನ್ನಾಸಕ; ತಿನ್ನಾಳಿ (ಬಹಳ ತಿನ್ನುವವ).

**ತಿರುಗು** ಕ್ರಿ. (ಅಡ್ಡಾಡು, ಸಂಚರಿಸು) ತಿರಕ; ತಿರಿಕುಳಿ (ತಿರಿದುಣ್ಣುವವ); ತಿರುಕ; ತಿರುಕಿ; ತಿರುಗಣಿ.

**ತಿಳಿ** ಕ್ರಿ. (ಅರಿ). ತಿಳಪು; ತಿಳುಪಳಿಕೆ.

**ತೀರು** ಕ್ರಿ. (ಮುಗಿ) ತೀರುಗಡೆ; ತೀರ್ಗಡೆ (ಸಮಾಪ್ತಿ); ತೀರ್ಪು (ನ್ಯಾಯತೀರುವಿಕೆ); ತೀರ್ವಿಕೆ; ತೀರ್ವಿಗೆ.

**ತುಡುಕು** ಕ್ರಿ. (ಕಡಿ) ತುಡುಗ (ಕಳ್ಳ); ತುಡುಗತನ; ತುಡುಗು; ತುಡುಗುಣಿ (ಉಣಿ=ಉಣ್ಣುವವ; ಕದ್ದು ತಿನ್ನುವವ)

**ತುಂಬು** ಕ್ರಿ. (ಪೂರ್ಣ ಮಾಡು). ತುಂಬಿ (ಗುಂಗೀ ಹುಳ); ತುಂಬು (ಕೋಡಿ); ತುಂಬೆ; ತುಂಬುವೆರೆ (ವೆರೆ, ಪೆರೆ=ಚಂದ್ರ; ಪೂರ್ಣ ಚಂದ್ರ)

**ತುರು** ನಾ. (ದನ, ಆಕಳು). ತುರುಗಾಹಿ (ಗಾಹಿ, ಕಾಹಿ=ಕಾಯುವವ; ಗೋವಳಿ): ತುರುಮಂದಿ (ಮಂದಿ=ಹಿಂಡು; ದನದ ಹಿಂಡು); ತುರುವಳ (ಗೊಲ್ಲ).

**ತುಳಿ** ಕ್ರಿ. (ಕಾಲಿನಿಂದ ತಿಕ್ಕು). ತುಳಿಲ್ (ಬಂಟತನ); ತುಳಿಲು; ತುಳಿಲಾಳು (ಆಳು=ಪುರುಷ; ಬಂಟಪುರುಷ).

**ತೂಗು** ಕ್ರಿ. (ಅಲ್ಲಾಗಿಸು). ತೂಕ (ಭಾರ); ತೂಕಡಿಕೆ; ತೂಗಡಿಕೆ; ತೂಗಮಣಿ.

**ತೆಗಳು** ಕ್ರಿ. (ನಿಂದಿಸು). ತೆಗಳಿಕೆ (ನಿಂದೆ); ತೆಗಳ್ಕೆ; ತೆಗಳು.

**ತೆರೆ** ಕ್ರಿ. (ಕೊಡು). ತೆರವು; ತೆರಿಗೆ (ಸರಕಾರಕ್ಕೆ ಕೊಡ ತಕ್ಕ ಹಣ) .

**ತೊಡು** ಕ್ರಿ. (ಧರಿಸು). ತೊಡ; ತೊಡಗೆ; ತೊಡವು; ತೊಡಿಗೆ (ವಸ್ತ್ರ); ತೊಡಿವೆ.

**ತೊಳಲು** ಕ್ರಿ. (ಶ್ರಮ ಪಡು). ತೊಳಲಿಕೆ; ತೊಳಲು (ಚಿಂತೆ); ತೊಳಲಾಟ (ಚಿಂತೆ).

**ತೋರು** ಕ್ರಿ. (ಕಾಣಿಸು). ತೋರಿಕೆ; ತೋರ್ಪು.

**ದಟ್ಟು** ಕ್ರಿ. (ಗುಂಪಾಗು). ದಟ್ಟ; ದಟ್ಟಣೆ; ದಟ್ಟೆ; ದಟ್ಟಡಿ (ಹುಡುಗರು ಇಡುವ ಹೆಜ್ಜೆಗಳು).

**ದಣಿ** ಕ್ರಿ. (ಶ್ರಮಗೊಳ್ಳು). ದಣವು; ದಣಿವು.

**ದುಡಿ** ಕ್ರಿ. (ಶ್ರಮ ಮಾಡು). ದುಡತ; ದುಡಿತ.

**ದುಮುಕು** ಕ್ರಿ. (ಹಾರು). ದುಮುಕಿ; ದುಮುಕೆ.

**ದೂಡು** ಕ್ರಿ. (ಓಡಿಸು). ದುಡಿಕೆ; ದೂಡಿಕೆ; ದೂಡು; ದೌಡು.

**ದೂರು** ಕ್ರಿ. (ನಿಂದಿಸು). ದುರಳ; ದುರುಳ; ದುರುಳತನ; ದುರುಳಾಟ.

**ದೊರೆ** ಕ್ರಿ. (ಶಿಕ್ಕು). ದೊರವು; ದೊರಿಕೆ; ದೊರೆತ.

**ನಗು** ಕ್ರಿ. (ಹಾಸ್ಯ ಮಾಡು). ನಗೆ (ಹಾಸ್ಯ, ಚೇಷ್ಟೆ); ನಗಿಚಾಟ (ನಗಿಸು+ಆಟ; ಚೇಷ್ಟೆ); ನಗೆಗೇಡಿ; ನಗೆಗೇಡು; ನಗೆಮಾತು.

**ನಡೆ** ಕ್ರಿ. (ಹೋಗು). ನಡತೆ; ನಡವಡಿಕೆ; ನಡವಳಿ; ನಡವಳಿತ; ನಡಾವಳಿ; ನಡಿಗೆ; ನಡೆಮಾಡು (ಆಕಾಶಯಾನ, ವಿಮಾನ).

**ನಂಬು** ಕ್ರಿ. (ವಿಶ್ವಾಸವಿಡು) ನಂಬಿಕೆ; ನಂಬಿಗೆ.

**ನಲಿ** ಕ್ರಿ. (ಮೆಚ್ಚು). ನಲ್ (ಮೆಚ್ಚತಕ್ಕ, ಚಲೋ); ನಲವು (ಸಂತೋಷ); ನಲಿವು; ನಲುವು; ನಲ್ಮೆ (ಮೆಚ್ಚುವಿಕೆ, ಪ್ರೀತಿ); ನಲ್ಲ (ಮೆಚ್ಚಿದವ, ಗಂಡ); ನಲ್ನುಡಿ (ನುಡಿ=ಮಾತು; ಚಲೋ ಮಾತು)

**ನಾಟು** ಕ್ರಿ. (ಬೇರುಗೊಳ್ಳು). ನಾಟಿಕೆ; ನಾಡ್ (ದೇಶ); ನಾಡಿಗ; ನಾಡಾಡಿಗ (ಆಡಿಗ=ನಡೆಯುವವ; ಜನ); ನಾಡಕರ್ಣಿ; ನಾಡಗೌಡ; ನಾಣ್ನುಡಿ (ನುಡಿ=ಮಾತು).

**ನಾಣ್ಚು** ಕ್ರಿ. (ನಾಚು). ನಾಚಿಕೆ; ನಾಣ್; ನಾಣು (ನಾಚಿಕೆ); ನಾಣಲ (ನಾಣ್+ಅಲ=ಅಲ್ಲದವ; ನಾಚಿಕೆಯಿಲ್ಲದವ); ನಾಣಿಲಿ (ನಾಣ್+ಇಲಿ=ಇಲ್ಲದವ; ನಾಚಿಕೆಗೇಡಿ); ನಾಚಿಕೆಗೇಡಿ; ನಾಚಿಕೆಗೇಡಿತನ.

**ನಾಲ್** ವಿ. (ನಾಲ್ಕು). ನಾಲ್ದೋಳ - (ತೋಳು=ಭುಜ; ನಾಲ್ಕು ಭುಜದವ, ವಿಷ್ಣು); ನಾಲ್ಮೊಗ (ಮೊಗ=ಮುಖ; ನಾಲ್ಕು ಮುಖದವ, ಬ್ರಹ್ಮ); ನಾಲ್ವಡಿ (ಅಡಿ=ಹೆಜ್ಜೆ); ನಾಲ್ವೆರಲ್ (ವೆರಲ್=ಬೆರಳು).

**ನಿಲ್, ನಿಲ್ಲು** ಕ್ರಿ. (ಹೋಗದಿರು). ನಿಲವು; ನಿಲುವೆ; ನೆಲ; ನೆಲೆ (ತಳ).

**ನೀರ್** ನಾ. (ನೀರು). ನೀರಳ್ಕೆ (ನೀರಡಿಕೆ); ನೀರ್ಗಿಚ್ಚು (ಕಿಚ್ಚು=ಬೆಂಕೆ; ವಡವಾಗ್ನಿ); ನೀರ್ದೇರು (ತೇರು=ರಥ; ಮೋಡ); ನೀರ್ವಕ್ಕಿ (ಹಕ್ಕಿ=ಪಕ್ಷಿ); ನೀರ್ವಣಿ (ವಣಿ=ಮಣಿ;—ನೀರೊಳಗೆ ಹುಟ್ಟಿವ ಮಣಿ, ಮುತ್ತು).

**ನುಡಿ** ಕ್ರಿ. (ಮಾತಾಡು). ನುಡಿ (ಮಾತು); ನುಡಿವೆಣ್ಣು (ವೆಣ್ಣು=ಹೆಣ್ಣು; ಮಾತಿನ ದೇವತೆ, ಸರಸ್ವತಿ).

**ನೆಗಳು** ಕ್ರಿ. (ಮಾಡು). ನೆಗಳಿಕೆ; ನೆಗಳ್ಕೆ; ನೆಗಳ್ತೆ.

**ನೋಡು** ಕ್ರಿ. (ದಿಟ್ಟಿಸು). ನೋಟ; ನೋಡುವಿಕೆ; ಕಿರಿನೋಟ; ವಾರಿನೋಟ.

**ಪಡು** ಕ್ರಿ. (ಬೀಳು, ಸಾಯು). ಪಡುವ; ಪಡುವಣ; ಪಡುವಲು; ಪಡುವೆಟ್ಟ (ಪಶ್ಚಿಮ ಬೆಟ್ಟ).

**ಪಳಿ** ಕ್ರಿ. (ಜರಿ, ನಿಂದಿಸು). ಪಳಿವು (ನಿಂದೆ, ದೋಷ); ಪಳಿವೊರ್ದದ (ಪೊರ್ದದ=ಹೊಂದದ; ಬಳಗಾಗದ, ಶುದ್ಧ).

**ಪಾರು** ಕ್ರಿ. (ಹಾರು). ಪಾರಿ (ಹಾದರಗಿತ್ತಿ); ಪಾರಿವಳ; ಪಾರಿವಾಣ; ಪಾರಿವಾಳ; ಪಾರುಂಬಳೆ (ಹಾರುವ ಅಸ್ತ್ರ, ಚಕ್ರ).

**ಪಿಡಿ** ಕ್ರಿ. (ಹಿಡಿ). ಪಿಡುಗ (ಹಿಗಿಯುವವ, ಶೂರ); ಪಿಡಿಗು (ರೋಗ).

**ಪಿರಿ** ಕ್ರಿ. (ದೊಡ್ಡದಾಗು). ಪಿರಿ (ದೊಡ್ಡ); ಪಿರಿತನ; ಪೆರ್ (ದೊಡ್ಡ); ಪೆರ್ಚ್ಚು (ದೊಡ್ಡಸ್ತಿಕೆ, ಬಲ, ಪರಾಕ್ರಮ); ಪೆರ್ಚ್ಚುಗೆ; ಪೇರ್ (ದೊಡ್ಡ); ಪೇರ್ಚ್ಚು; ಪೇರ್ಮೆ (ದೊಡ್ಡಸ್ತಿಕೆ, ಕೀರ್ತಿ); ಪಿರಿದಾಸೆ (+ಆಸೆ=ಬಯಕೆ; ಬಹಳ ಆಸೆ); ಪೆರ್ಬೊಡೆಯ (+ಬೊಡೆ, ಹೊಡೆ=ಹೊಟ್ಟೆ; ದೊಡ್ಡ ಹೊಟ್ಟೆಯುವ, ಗಣೇಶ); ಪೇರ್ದಲೆ (ದೊಡ್ಡ ತಲೆ); ಪೇರ್ದೊರೆ (+ತೊರೆ=ಹೊಳೆ); ಪೇರ್ಬೆಟ್ಟ (ಬೆಟ್ಟ=ಗುಡ್ಡ); ಪೇರ್ಮಡು (ಮಡು=ಮಡುವು).

**ಪುರುಡು** ಕ್ರಿ. (ಹಂಗಿಸು). ಪುರುಡು; ಪುರುಳು (ಹುರುಳು=ಹೆಮ್ಮೆ).

ಪೂ ಕ್ರಿ (ಹೂವಾಗು). ಪೂವು (ಹೂವು); ಪೂಗಣೆಯ (ಗಣೆ=ಬಾಣ; ಹೂವಿನ ಬಾಣದವ, ಕಾಮ); ಪೂಗಣ್ಣ (+ಕಣ್ಣು; ಹೂವಿನ ಕಣ್ಣುಳ್ಳವ); ಪೂಗಾಳಿ (ಹೂವಿನ ಮೇಲೆ ಹಾರಿ ಬಂದ ಗಾಳಿ); ಪೂಗೊಳ (ಕೊಳ=ಸರೋವರ; ಹೂಗಳುಳ್ಳ ಸರೋವರ); ಪೂಮಳೆ (ಹೂವಿನ ಮಳೆ, ಪುಷ್ಪವೃಷ್ಟಿ); ಪೂವಡಿಗ (ಹೂಗಾರ); ಪೂವಾಸೆ (ವಾಸೆ, ಪಾಸೆ, ಹಾಸೆ=ಹಾಸಿಗೆ; ಹೂವಿನ ಹಾಸಿಗೆ).

ಪೊಣರು ಕ್ರಿ. (ಕಾದು) ಪೊರ್ಣ (ಜಗಳ, ದ್ವಂದ್ವ); ಪೊಣರು; ಪೊಣರೆ; ಪೊಣರ್ವಕ್ಕಿ (ಜೋಡಹಕ್ಕಿ, ಚಕ್ರವಾಕಪಕ್ಷಿ).

ಪೊಂ, ಪೊನ್ ನಾ. (ಬಂಗಾರ, ಚಿನ್ನ). ಪೊಂಗಾಣಿಕೆ (ಕಾಣಿಕೆ — ಬಂಗಾರದ ಕಾಣಿಕೆ); ಪೊಂಗೆಜ್ಜೆ (ಬಂಗಾರದ ಗೆಜ್ಜೆ); ಪೊಂದಳಿಗೆ (ತಳಿಗೆ; ಬಂಗಾರದ ಗಂಗಾಳ); ಪೊಂದೊಡಿಗೆ (ತೊಡಿಗೆ=ವಸ್ತ್ರ; ಬಂಗಾರದ ವಸ್ತ್ರ); ಪೊನ್ನೊಡೆಯ (ಒಡೆಯ=ಅಧಿಪತಿ, ಕುಬೇರ); ಪೊಂಬಟ್ಟೆ (ಬಂಗಾರದ ವಸ್ತ್ರ); ಪೊಂಬಸುರ (ಬಂಗಾರದ ಬಸುರಿನವ, ಹಿರಣ್ಯಗರ್ಭ, ಬ್ರಹ್ಮ); ಪೊಂಬೆಟ್ಟ (ಬೆಟ್ಟ=ಗುಡ್ಡ; ಮೇರುಗಿರಿ).

ಪೊಯ್ಯು ಕ್ರಿ. (ಹೊಯ್ಯು). ಪೊಯಿಗೆ; ಪೊಯಿಲು; ಪೊಯ್ಗಡಬು (ಕಡಬು,—ಒಂದು ತಿನ್ನುವ ಪಕ್ವಾನ್ನದ ಜೀನಸು); ಪೊಯ್ನೀರು.

ಪೊಳೆ ಕ್ರಿ. (ಹೊಳೆ, ಪ್ರಕಾಶಿಸು); ಪೊಳಪು (ಬೆಳಕು); ಪೊಳ್ತಡೆ (ಮುಂಜಾವು); ಪೊಳ್ತಾರೆ; ಪೊಳ್ತು [ಪೊತ್ತು; ಹೊತ್ತು].

ಬಡಿ ಕ್ರಿ. (ಹೊಡೆಯು). ಬಡ; ಬಡಕ; ಬಡತ; ಬಡಿ; ಬಡಿಗೆ.

ಬರು ಕ್ರಿ. (ಐತರು). ಬರವು; ಬರುವಿಕೆ; ಬರುವು.

ಬರೆ ಕ್ರಿ (ಅಕ್ಷರ ತೆಗಿ). ಬರಹ; ಬರೆಯುವಿಕೆ; ಬರೆವು; ಕೈಬರಹ; ಹಣೇಬರಹ.

ಬರೆ ಕ್ರಿ. (ಬತ್ತು, ಬಣಗು). ಬರ (ಮಳೆ ಇಲ್ಲದ್ದಕ್ಕೆ ಧಾನ್ಯಾದಿಗಳು ಬಣಗಿ ಹೋಗುವ ಕಾಲ); ಬರಡ (ಬತ್ತಿದ, ರಸವಿಲ್ಲದ); ಬರಿ (ಬಣ, ವ್ಯರ್ಥ); ಬರೆ.

ಬಲಿ ಕ್ರಿ. (ದೊಡ್ಡದಾಗು). ಬಲು (ಬಹು, ದೊಡ್ಡದು); ಬಲುಮೆ (ಬಲಾತ್ಕಾರ); ಬಲುವು; ಬಲುಹು; ಬಲುಮೆಗಾರ.

ಬಾಗು ಕ್ರಿ. (ಮಣಿ). ಬಾಗಿಲ; ಬಾಗು (ಡೊಂಕು); ಬಾಗುವಿಕೆ.

ಬಾಚು ಕ್ರಿ. (ಬಿಡಿಸು, ಹಿಕ್ಕು). ಬಾಚಿ; ಬಾಚೆ; ಬಾಚಣಿ; ಬಾಚಣಿಕೆ (ಹಣಿಗೆ).

ಬಾನ್ ನಾ. (ಮುಗಿಲು, ಆಕಾಶ). ಬಾಂದಳ (ತಳ=ಪೃಷ್ಠಭಾಗ); ಬಾಂದೊರೆ (ತೊರೆ=ನದಿ; ಆಕಾಶಗಂಗೆ); ಬಾಂಬೊಳೆ (ಬೊಳೆ, ಹೊಳೆ=ನದಿ); ಬಾನ್ಮಣಿ (ಮಣಿ=ರತ್ನ; ಸೂರ್ಯ).

ಬಾಳು ಕ್ರಿ. (ನಾಲ್ಕು ದಿನ ತಾಳು, ಬದುಕಿರು). ಬಾಳಕ (ಬಣಗಿಸಿಟ್ಟ ಕಾಯಿಪಲ್ಲೆಗಳು); ಬಾಳಿಕೆ; ಬಾಳು; ಬಾಳುವೆ.

ಬಿಗಿ ಕ್ರಿ. (ಘಟ್ಟಿಯಾಗಿ ಕಟ್ಟು). ಬಿಗತ; ಬಿಗಿ (ಗಡಚು); ಬೀಗ.

ಬಿತ್ತು ಕ್ರಿ. (ಬೀಜವನ್ನು ಹಾಕು). ಬಿತ್ತಿಗಿ; ಬಿತ್ತಿಗೆ.

ಬಿರಿ ಕ್ರಿ. (ಒಡೆಯು) ಬಿರಕು; ಬಿರಡಿ; ಬಿರಪು; ಬಿರಿ; ಬಿರಿಸು (ಕಠಿಣ); ಬೆರಳು (ಬೊಟ್ಟು).

ಬೀಸು ಕ್ರಿ. (ಆಡು, ತಿರಗು). ಬೀಸು (ವಿಸ್ತಾರ); ಬೀಸಣಿಕೆ; ಬಿಸಣಿಗೆ; ಬೀಸುಗಲ್ಲು.

**ಬೀಳು** ಕ್ರಿ. (ಪತನವಾಗು). ಬೀಳ; ಬೀಳು; ಬೀಳಿಗೆ; ಬೀಳಿಕೆ; ಬೀಳಿಲು (ಮರದ ಪೋಂಬೆ); ಬೀಳ್ತು.

**ಬೆದರು** ಕ್ರಿ. (ಅಂಜು). ಬೆದರಿಕೆ; ಬೆದರು; ಬೆದರುಬಡಕ.

**ಬೆರೆ** ಕ್ರಿ. (ಕೂಡು). ಬೆರಿಕೆ; ಬೆರೆ.

**ಬೆಳೆ** ಕ್ರಿ. (ವೃದ್ಧಿಯಾಗು). ಬೆಳೆ (ಪೈರು); ಬೆಳ್ವೊಲ (ಬೆಳೆಯುವ ಹೊಲ; ಇದರ ಮೇಲಿಂದ ಚನ್ನಾಗಿ ಬೆಳೆಯುವ ನಾಡು)

**ಬೇಯು** ಕ್ರಿ. (ಪಕ್ವವಾಗು). ಬೆಂಕೆ; ಬೇಗೆ; ಕಾಡಬೇಗೆ.

**ಬೇಸರು** ಕ್ರಿ. (ಆಲಸ್ಯ ಬರು) ಬೇಸರ; ಬೇಸರಿಕೆ.

**ಮಣಿ** ಕ್ರಿ. (ಬಾಗು). ಮಣಾತ; ಮಣಿಕೆ; ಮಣಿವು; ಮಣೆ.

**ಮರೆ** ಕ್ರಿ. (ನೆನಪುಗೆಡು). ಮರವಿಕೆ; ಮರವು; ಮರವೆ; ಮರುಗುಳಿ (ಮರೆಯುವವ); ಮರುಳ (ನೆನಪುಗೇಡಿ, ದಡ್ಡ); ಮರುಳ್ತನ; ಮರೆ.

**ಮಿಗು** ಕ್ರಿ. (ಮೀರು, ಹೆಚ್ಚಾಗು) ಮಿಗಲು; ಮಿಗಿಲು; ಮಿಗು; ಮಿಗೆ.

**ಮಿನು** ಕ್ರಿ. (ಪ್ರಕಾಶಿಸು). ಮಿನ್ನುಕು; ಮಿನುಗು; ಮಿನುಪು.

**ಮೀ** ಕ್ರಿ. (ನೀರೊಳಗೆ ಸೇರು, ಸ್ನಾನ ಮಾಡು). ಮೀಸ್; ಮೀನ; ಮೀನು; ಮೀನಗುಲಿ (ಗುಲಿ, ಕುಲಿ=ಕೊಲ್ಲುವವ).

**ಮುಂ** ವಿ. (ಮುಂಚಿನ). ಮುನ್ನ (ಮೊದಲಿನ, ಪ್ರಾಚೀನ); ಮುಂಗಡ (ಗಡ, ಕಡ=ಸಾಲ; ಕೆಲಸ ಮಾಡುವದಕ್ಕಾಗಿ ಮೊದಲು ಕೊಟ್ಟ ಹಣ); ಮುಂಗಾರು (ಕಾರು=ಮಳೆ; ಮೊದಲಿನ ಮಳೆ); ಮುಂಗಾಳು (ಕಾಳು=ಕತ್ತಲೆ; ಹೊತ್ತು ಮುಳುಗಿದ ಮೇಲೆ ಬೀಳುವ ಮಬ್ಬು); ಮುಂಜಾವು (ಜಾವು=ಯಾಮ; ಪ್ರಾತಃಕಾಲ); ಮುಂಬಗಲು (ಬಗಲು=ಹಗಲು; ಪ್ರಾತಃಕಾಲ).

**ಮುಗಿ** ಕ್ರಿ. (ಕಡೆಯಾಗು). ಮುಗಿತ; ಮುಗಿಲು (ವಿಶ್ವದ ಕಡೇ ಭಾಗ, ಆಕಾಶ).

**ಮುಚ್ಚು** ಕ್ರಿ. (ಅಡಗಿಸು, ಮುಸುಕು). ಮುಚ್ಚಳ; ಮುಚ್ಚಳಿಕೆ; ಮುಚ್ಚುವಿಕೆ.

**ಮುತ್ತು** ಕ್ರಿ. (ಸುತ್ತುಗಟ್ಟು). ಮುತ್ತಿಗೆ; ಮುತ್ತುವಿಕೆ.

**ಮುನಿ** ಕ್ರಿ. (ಸಿಟ್ಟಾಗು). ಮುನಿಸು; ಮುನುಸು; ಮುನಿಸುಗಾರ.

**ಮುರಿ** ಕ್ರಿ. (ಭಂಗಿಸು). ಮುರಕ; ಮುರಕು; ಮುರಡು; ಮುರತ (ವಿಷದ ವೇಗ ಮುರಿಯಲಿಕ್ಕೆ ಕೊಟ್ಟ ಔಷಧ); ಮುರವು (ಹುಡುಗರ ಕಿವಿಯೊಳಗಿನ ಆಭರಣ); ಮುರಿಗೆ (ಡೊಂಕು); ಮುಪ್ಪು [ಮುಪ್ಪು=ಶರೀರದ ಶಕ್ತಿ ಮುರಿದು, ಅಂದರೇನು, ಕ್ಷೀಣವಾಗಿ ಹೋಗುವ ಅವಸ್ಥೆ]; ನಾಗಮುರಿಗೆ (ಹೆಂಗಸರು ಕೈಯಲ್ಲಿ ಹಾಕತಕ್ಕ ಸರ್ಪದಂತೆ ಡೊಂಕಾದ ತೊಡಿಗೆ).

**ಮೂಡು** ಕ್ರಿ. (ಹುಟ್ಟು). ಮೂಡ (ಪೂರ್ವ ದಿಕ್ಕು); ಮೂಡಣ; ಮೂಡಲ; ಮೂಡಲು; ಮೂಡಿಗೆ; ಮೂಡು.

**ಮೂ, ಮೂರ್** ಕ್ರಿ. (ಮೂರು) ಮೂವರು; ಮುಕ್ಕಣ್ಣ (ಮೂರು ಕಣ್ಣಿನವ, ಶಿವ); ಮುಪ್ಪೊಳಲು (ಪೊಳಲು=ಪಟ್ಟಣ; ತ್ರಿಪುರ); ಮೂಜಗ; ಮೂಸಂಜೆ.

**ಮೆಚ್ಚು** ಕ್ರಿ. (ಒಲಿ). ಮೆಚ್ಚಿಗೆ; ಮೆಚ್ಚು (ಪ್ರಸಾದ); ಮೆಚ್ಚುವಣಿ; ಮೆಚ್ಚುವಿಕೆ.

**ಮೆರೆ** ಕ್ರಿ. (ಶೋಭಿಸು). ಮೆರಪು; ಮೆರವಣಿಗೆ.

**ಮೇ** ಕ್ರಿ. (ದವಡಿಯಿಂದ ತಿನ್ನು). ಮೇಕೆ (ಕುರಿ); ಮೇವು.

**ಮೊಳೆ** ಕ್ರಿ. (ಹುಟ್ಟು). ಮೊಳಕೆ; ಮೊಳಿಕೆ; ಮೊಳೆ; ಮೊಳೆತ.

ರಾಟು ಕ್ರಿ. (ತಿರಗಿಸು). ರಾಟಣ; ರಾಟಿ; ರಾಟೆ; ಕೈರಾಟೆ; ಕಾಲ ರಾಟೆ.

ರಾವು ಕ್ರಿ. (ಬೇಗನೆ ಓಡು). ರಾಪು (ಓಟ); ರಾವು; ರಾವುತ (ಕುದುರೆಯನ್ನು ಓಡಿಸುವವ, ಸವಾರ).

ಲಾಗು ಕ್ರಿ. (ಜಿಗಿ). ಲಾಗ; ಲಾಗು; ಲಾಗಾಟ; ಕೈಲಾಗ; ತಿಪ್ಪರ ಲಾಗ.

ಸೆಲ್, ಸಲ್ಲು ಕ್ರಿ. (ಮುಟ್ಟು). ಸಲುವು; ಸಲುವಳಿ; ಸಲುವಾಗಿ (ಮುಟ್ಟುವದಕ್ಕಾಗಿ, ಉದ್ದೇಶದಿಂದ).

ಸವಿ ಕ್ರಿ. (ತಿನ್ನು, ರುಚಿ ನೋಡು). ಸವಿ (ರುಚಿ); ಸವಿಗಾರ; ಸವಿಗುಳಿ; ಸವಿಗೋಲು (ಕಬ್ಬು); ಸವಿಯುಣಿ.

ಸಾಗು ಕ್ರಿ. (ಹಸನ ಮಾಡು). ಸಾಗು; ಸಾಗುವಳಿ.

ಸಾಲು ಕ್ರಿ. (ಸಾಕಾಗು). ಸಾಲ; ಸಾಲಗಾರ; ಸಾಲಗುಳಿ (ಸಾಲಾ ಮಾಡುವವ); ಸಾಲವಣಿಗ (ಸಾಲಗಾರ).

ಸಿಗಿ ಕ್ರಿ. (ಚಿವುರು). ಸಿಗಿತ; ಸಿಗುರಿ (ಚಿವುರಫಾಯ); ಸಿಗುರು (ಸಿಬರು).

ಸಿಡಿ ಕ್ರಿ. (ಒಮ್ಮಿಂದೊಮ್ಮೆ ಬೀಳು, ತಾಕು); ಸಿಟ್ಟು; ಸಿಡಕ; ಸಿಡಿಲು; ಸೇಡು.

ಸೀಪು ಕ್ರಿ. (ಹೀರಿ ತಿನ್ನು). ಸಿಪ್ಪಿ; ಸಿಪ್ಪೆ; ಸೀಪು.

ಸುಡು ಕ್ರಿ. (ಬೆಂಕಿ ಹಚ್ಚು). ಸುಡುಗಾಡು (ಸುಡು+ಕಾಡು; ಮಸಣ); ಸುಡುಬಾಳ್ವೆ (ದುಃಖದಲ್ಲಿ ಇರೋಣ).

ಸುತ್ತು ಕ್ರಿ. (ಕಟ್ಟು, ಸುರುಳು, ಮುತ್ತು). ಸುತ್ತ; ಸುತ್ತರ; ಸುತ್ತಿ; ಸುತ್ತಿಗೆ; ಸುತ್ತು; ಸುತ್ತಳತೆ (ಸುತ್ತು+ಅಳತೆ; ಪರಿಘ).

**ಸುರಿ** ಕ್ರಿ. (ಚಲ್ಲು). ಸೂರಿ; ಸೂರಿಗೆ; ಸೂರು; ಸೂರೆ; ಸೂರಾಟ.

**ಸುರುಳು** ಕ್ರಿ. (ಸುತ್ತು). ಸುರುಳಿ; ಸುರುಳು; ಸುರ್ಳಿ [ಸುಳ್ಳಿ]

**ಸುಲಿ** ಕ್ರಿ. (ಲೂಟು ಮಾಡು). ಸುಲಿಗೆ; ಸುಲಿತ; ಸುಲಿವು.

**ಸುಳಿ** ಕ್ರಿ. (ತಿರಗು). ಸುಳಿ (ತಿರಗಣಿ, ಮಡವು); ಸುಳಿವು (ತಿರುಗಾಟ); ಸುಳುಕು; ಸುಳುಹು.

**ಸೆಳೆ** ಕ್ರಿ. (ಜಗ್ಗು). ಸೆಳ; ಸೆಳಕು; ಸೆಳತ; ಸೆಳವು (ವೇಗ).

**ಸೋಗು** ಕ್ರಿ. (ಮುಚ್ಚು). ಸೋಗು (ಮೂಲ ಸ್ವರೂಪ ಮುಚ್ಚುವದಕ್ಕಾಗಿ ಹಾಕಿದ ವೇಷ); ಸೋಗೆ (ಕಬ್ಬು ಮುಂತಾದವುಗಳ ಮೇಲಿನ ಆವರಣ).

**ಸೋರು** ಕ್ರಿ. (ಒಸರು). ಸೋರು; ಸೋರಿಕೆ.

**ಸೋಲು** ಕ್ರಿ. (ಪರಾಜಯ ಪಡು). ಸೋಲಿಕೆ; ಸೋಲ್ವಿಕೆ; ಸೋಲು; ಸೋಲ್ಗೆಲವು (ಅಪಜಯ, ಜಯ).

**ಹಂಗಿಸು** ಕ್ರಿ. (ಹೀನ ಪಡಿಸು). ಹಂಗಿಗ; ಹಂಗು; ಹಂಗಾಳು (ಆಳು=ಮನುಷ್ಯ).

**ಹಂಚು** ಕ್ರಿ. (ಪಾಲು ಮಾಡು). ಹಂಚಿಕೆ; ಹಂಚುವಿಕೆ; ಹಂಚಿಗಾರ (ಪಾಲು ಮಾಡುವವ); ಹಂಚುವಿಕೆ.

**ಹತ್ತು** ಕ್ರಿ. (ಹೊಂದಿರು). ಹತ್ತಣಿ; ಹತ್ತರ (ಬಳಿಯಲ್ಲಿ); ಹತ್ತಿಕೆ; ಹತ್ತಿಗೆ; ಹತ್ತುಳಿ.

**ಹಬ್ಬು** ಕ್ರಿ. (ಪಸರಿಸು). ಹಬ್ಬಿಕೆ; ಹಬ್ಬುಗೆ (ಪಸರ, ಸಮೂಹ, ಗುಂಪು).

**ಹರವು** ಕ್ರಿ. (ಪಸರಿಸು). ಹರವು (ಪಸಾರ); ಹರಿವೆ (ಅಗಲ ಬಾಯಿಯ ಪಾತ್ರೆ).

**ಹರಿ** ಕ್ರಿ. (1) (ತುಂಡು ತುಂಡು ಮಾಡು). ಹರಕ; ಹರಕು; ಹರತ (ಹದನ).

(2) (ಓಘುಗೊಂಡು ಹೋಗು). ಹರಿ.

**ಹಸಿ** ಕ್ರಿ. (ಕ್ಷುಧೆ ಹುಟ್ಟು). ಹಸಿವು; ಹಸಿವೆ.

**ಹಾಯು** ಕ್ರಿ. (1) (ಹೋಗು) ಹಾದಿ; ಹಾದಿಕಾರ; ಹಾದಿಗ; ಹಾಯುಗಡ (ಹೊಳೆ ದಾಟ ತಕ್ಕ ಸ್ಥಳ).

(2) (ತಿವಿ, ಘಾಯ ಮಾಡು). ಹಾಯ್ತು; ಹಾವಳಿ.

**ಹಾರು** ಕ್ರಿ. (ಜಿಗಿ). ಹಾರಿಕೆ; ಹಾರೆ; ಹಾರುಗಾಲಿ (ಹಾರುತ್ತಾ ಬಂದ ಸುದ್ದಿ); ಹಾರುವಾಳ [ಪಾರುವಾಳ].

**ಹಾಸು** ಕ್ರಿ. (ಪಸರಿಸು). ಹಾಸಿಕೆ; ಹಾಸಿಗೆ; ಹಾಸು (ಪಸರಿಸಿದ); ಹಾಸುಗಲ್ಲು.

**ಹಿಗ್ಗು** ಕ್ರಿ. (ಸಂತೋಷದಿಂದ ಉಬ್ಬು) ಹಿಗ್ಗಿಕೆ; ಹಿಗ್ಗು; ಹಿಗ್ಗುವಿಕೆ; ಹಿಗ್ಗಾಳು (ಹಿಗ್ಗು+ಆಳು; ಭವ್ಯ ಮೈಕಟ್ಟಿನ ಪುರುಷ); ಹಿಗ್ಗುದಲೆ.

**ಹಿಂ** ವಿ. (ಹಿಂದಿನ, ಈಚೆಯ). ಹಿಂಗಾರು (ಹಿಂದಿನ ಮಳೆ); ಹಿಂಬರುಗ (ಬೆನ್ನಟ್ಟಿ ಬರುವವ); ಹಿಂಬಾಲ; ಹಿಮ್ಮಡ; ಹಿಮ್ಮೇಳ.

**ಹಿಂಡು** ಕ್ರಿ. (ರಸ ತೆಗೆ). ಹಿಂಡಿ (ಎಣ್ಣೆ ತಕ್ಕೊಂಡ ಮೇಲೆ ಗಾಣದೊಳಗೆ ಉಳಿದ ಕಾಳಿನ ಶೇಷ); ಹಿಂಡಿಗೆ.

**ಹಿಡಿ** ಕ್ರಿ. (ಕೈಯಿ ಧರಿಸು). ಹಿಡಿ; ಹಿಡಿಕೆ; ಹಿಡಿತ; ಹಿಡುಪು.

**ಹಿರಿ** ಕ್ರಿ. (ದೊಡ್ಡದಾಗು). ಹಿರಿ; ಹಿರಿಯು; ಹಿರಿಯತನ; ಹಿರೇತನ.

**ಹುಗಿ** ಕ್ರಿ. (ನೆಲದೊಳಗೆ ಹಾಕು). ಹುಗತಿ; ಹುಗಿಲು [ಹುದಿಲು= ಕೆಸರು]; ಹುಗುಲು (ಶೂಹು).

**ಹುಟ್ಟು** ಕ್ರಿ (ಜನ್ಮತಾಳು, ಮೂಡು). ಹುಟ್ಟಾವಳಿ; ಹುಟ್ಟು; ಹುಟ್ಟುವಳಿ.

**ಹುಸಿ** ಕ್ರಿ. (ಸುಳ್ಳು ಹೇಳು). ಹುಸಿ (ಸುಳ್ಳು); ಹುಸಿಗ (ಸುಳ್ಳ); ಹುಸಿಗಾರ; ಹುಸಿನುಡಿ.

**ಹುಳು** ಕ್ರಿ (ಕೊಳೆ). ಹುಳ; ಹುಳು; ಹುಳುಕ (ಕೊಳೆತ, ಹುಳ ಹತ್ತಿದ); ಹುಳುಕು; ಹುಳ್ಳು [ಹುಣ್ಣು].

**ಹೆಚ್ಚು** ಕ್ರಿ. (ಬೆಳೆ, ವೃದ್ಧಿಯಾಗು). ಹೆಚ್ಚಳ (ಬೇಕಾದಷ್ಟು); ಹೆಚ್ಚಿಕೆ; ಹೆಚ್ಚಿಗೆ; ಹೆಚ್ಚು (ದೊಡ್ಡಸ್ತನ).

**ಹೆಣಿ** ಕ್ರಿ. (ನೇಯು). ಹೆಣತ; ಹೆಣಪು; ಹೆಣಲು [ಹೆಳಲು]; ಹಿಣಿಕೆ; ಹೆಣಿಗೆ.

**ಹೆದರು** ಕ್ರಿ. (ಅಂಜು). ಹೆದರಿಕೆ; ಹೆದರು.

**ಹೆರು** ಕ್ರಿ. (ಘಟ್ಟಿಯಾಗು). ಹೆಪ್ಪು; ಹೆರಲು; ಹೆರಿಕೆ; ಹೆರಿಗೆ.

**ಹೇರು** ಕ್ರಿ. (ಬಜ್ಜೆ ಹಾಕು). ಹೇರಿಗೆ; ಹೇರು; ಹೇರಾಟ; ಹೇರಾಳು.

**ಹೇಸು** ಕ್ರಿ. (ಅಸಹ್ಯ ಪಡು). ಹೇಸರ; ಹೇಸರಿಕೆ; ಹೇಸಿ; ಹೇಸಿಕೆ; ಹೇಸಿಗೆ.

**ಹೊಗು** ಕ್ರಿ. (ಸೇರು). ಹೊಗುವಿಕೆ; ಹೊಗುಪು; ಹೊಗೆ.

**ಹೊಡೆ** ಕ್ರಿ. (ಜಡಿ). ಹೊಡಿಕೆ; ಹೊಡೆತ; ಹೊಡೆದಾಟ.

**ಹೊದಿ** ಕ್ರಿ (ಮೈಮೇಲೆ ಅರಿವೆ ಮುಂತಾದ್ದು ಹಾಕಿಕೊಳ್ಳು). ಹೊದಿ; ಹೊದಿಕೆ; ಹೊದಿಗೆ.

**ಹೊರಳು** ಕ್ರಿ. (ಸುತ್ತಾಡು, ಉರುಳಾಡು). ಹೊರಳಿ; ಹೊರಳಿಕೆ; ಹೊರಳ್ತಿ.

**ಹೊರು** ಕ್ರಿ (ಧರಿಸು). ಹೊರೆ (ಒಜ್ಜೆ); ಹೊರೆಗಾರ; ಹೊರೆಯಾಳು.

**ಹೊಳೆ** ಕ್ರಿ (ಧಳಧಳಿಸು). ಹೊಳಪು; ಹೊಳವು; ಹೊಳೆತ.

ಸಂಪೂರ್ಣ